ಶಾರದೆಯ ಮುತ್ತಿನ ಸರ

( ೫ )

# ಶುದ್ಧಿಸಂಘಟನ

ಲೇಖಕ ಮತ್ತು ಪ್ರಕಾಶಕ

**ಪಂಡಿತ ಭೀ. ಜೀ. ಹುಲಿಕವಿ,** ಎಸ್. ಟೀ. ಸೀ.

ಉಪಾಧ್ಯಾಪಕ ಗವ್ನ. ಹಾಯಸ್ಕೂಲ

ಮತ್ತು

ಸಂಪಾದಕ ‘ **ಶಾರದೆ** ’ ಶಾರದಾಮಂದಿರ, ಧಾರವಾಡ





**Printed by M. K. Joshi at the K. P. Works, Dharwar and Published by Pandit B. J. Hulikavi at the Sharda Mandira, DHARWAR.**

**ಶಕೆ ೧೮೫೧**

ಶುಕ್ಲಸಂವತ್ಸರ—ಚೈತ್ರ ಮತ್ತು ವೈಶಾಖ

**ಬೆಲೆ ೧–೦–೦**

# ಅರ್ಪಣಾ ಪತ್ರಿಕೆ



ನನ್ನ ಪರಮಪೂಜ್ಯ ಮಾತಾಮಹಿಯರಾದ

ವೈ. ವಾ. ಕಾಶೀಬಾಯಿ ಗೋಪಾಳರಾವ ಮುಜುಮದಾರ

ಇವರ ಸ್ವರ್ಗಸ್ಥವಾದ

ಆತ್ಮಕ್ಕೆ

ಚಿರಶಾಂತಿಯುಂಟಾಗಲೆಂದು

ಅತ್ಯಂತಕೃತಜ್ಞತೆಯಿಂದಲೂ ಮಾತೃಭಕ್ತಿಯಿಂದಲೂ

## ಶುದ್ಧಿ-ಸಂಘಟನ

ಎಂಬ

ಈ ಚಿಕ್ಕ ಪುಸ್ತಕವನ್ನು

ಸಮರ್ಪಿಸಿದ್ದೇನೆ.

— ಲೇಖಕ

# ನಿವೇದನ

ಇದು ಶಾರದೆಯ ಶುಕ್ಲ ಸಂವತ್ಸರದ ವಸಂತದ (ಚೈತ್ರ ಮತ್ತು ವೈಶಾಖ ಈ ಮಾಸಗಳ) ಸಂಚಿಕೆಯೂ ಕಾಣಿಕೆಯ ಪುಸ್ತಕವೂ ಆಗಿದೆ. ಬಡವೆಯಾದ ಶಾರದೆಯು ಬಡತನದ ಈ ಕಾಲದಲ್ಲಿ ಬಡತನದ ರೀತಿಯಿಂದಲೇ ತನ್ನ ಓದುಗರಿಗೆ ಮನ್ನಣೆಯನ್ನು ಮಾಡಿದ್ದಾಳೆ. ಸಹೃದಯರಾದ ಬಂಧು-ಭಗಿನಿಯರು ಇದನ್ನು ಸಪ್ರೇಮವಾಗಿ ಸ್ವೀಕರಿಸುವರೆಂದು ಕೋರುತ್ತೇವೆ.

ಶಿವಾಜಿಯ ಕಾಲದ ಮಹಾರಾಷ್ಟ್ರವು ಈಗಿನ ಹಿಂದೂ ಸಮಾಜಕ್ಕೆ ಪೂಜಾ ಸ್ಥಾನವಾಗಿದೆ. ಆ ಕಾಲದಲ್ಲಿ **ಹಿಂದೂ ಮನುಷ್ಯನು ಯಾರು? ಶುದ್ಧಿ ಸಂಘಟನವು ಆದರಣೀಯವೇ ಅಲ್ಲವೇ?** ಎಂಬ ಪ್ರಶ್ನೆಗಳಿಗೆ ಯಾವ ಉತ್ತರವು ಕೊಡಲ್ಪಡುತ್ತಿತ್ತೆಂಬುದರ ಶಬ್ದ ಚಿತ್ರವು ಈ ಚಿಕ್ಕಪುಸ್ತಕದಲ್ಲಿ ರೇಖಿಸಲ್ಪಟ್ಟಿದೆ. ಶಿವಾಜಿಯ ಕಾಲದ ಪರಿಸ್ಥಿತಿಯ ಪ್ರತ್ಯವಲೋಕನದಿಂದ ಈಗಿನ ಕಾಲದಲ್ಲಿ ಕೂಡ ಅನೇಕಸಂಗತಿಗಳನ್ನು ನಾವು ಕಲಿಯಬಹುದಾಗಿದೆಯೆಂಬ ವಿಚಾರವು ಸರ್ವಮಾನ್ಯವಾಗುತ್ತ ನಡೆದಿರುವದರಿಂದ, ಮೇಲಿನ ಮಹತ್ವದ ಪ್ರಶ್ನೆಗಳ ಉತ್ತರವು ಈಗಿನ ಕಾಲದಲ್ಲಿಯೂ ಜನಸಮಾಜಕ್ಕೆ ಬೋಧಪ್ರದವಾಗಬಹುದೆಂದು ತಿಳಿದು ಈ ಕೆಲಸವನ್ನು ಕಯ್ಕೊಂಡಿದ್ದೇವೆ. ನಮ್ಮ ದೇಶದವರೆಲ್ಲರನ್ನೂ ಒಂದುಗೂಡಿಸಬೇಕೆಂಬ **ಶ್ರೀ ರಾಮದಾಸರ** ಉಪದೇಶವು ಈಗಿನ ಕಾಲದಲ್ಲಿಯಾದರೂ ಆಗಿನಷ್ಟೇ ಉಪಯೋಗಕರವಾದುದಿರುತ್ತದೆ. ಆದದರಿಂದ ಮತ ಸ್ವಾತಂತ್ರ್ಯದ ಈಗಿನ ಕಾಲದಲ್ಲಿ ರಾಷ್ಟ್ರೀಯದೃಷ್ಟಿಯಿಂದ ಅತ್ಯಂತಮಹತ್ವವುಳ್ಳ ಮೇಲಿನ ಪ್ರಶ್ನೆಗಳಿಗೆ ಶಿವಾಜಿಯ ಕಾಲದಲ್ಲಿ ಯಾವ ಉತ್ತರವು ದೊರೆಯುತ್ತಿದ್ದುವೆಂಬುದನ್ನು ವಿಚಾರಿಸುವುದು ಬಲು ಅವಶ್ಯವಾಗಿದೆ.

ಕ್ರಿ. ಶ. ೧೬೪೬ನೆಯ ವರುಷದಲ್ಲಿ ಈ ಕಥೆಯು ನಿಜವಾಗಿಯೂ ನಮ್ಮ ದೇಶದಲ್ಲಿ ಸಂಭವಿಸಿತು. ಐತಿಹಾಸಿಕಸಂಗತಿಯು ವಿಪರ್ಯಸ್ತವಾಗದಂತೆ ಕಥಾಲೇಖಕರಿಗೆ ಇರತಕ್ಕ ಸ್ವಾತಂತ್ರ್ಯವನ್ನು ಮಾತ್ರ ಈ ಪುಸ್ತಕದಲ್ಲಿ ಉಪಯೋಗಿಸಿದೆ. ಆದುದರಿಂದ ಐತಿಹಾಸಿಕ ದೃಷ್ಟಿಯಿಂದ ಈ ಪುಸ್ತಕವನ್ನು ಓದುವವರು ಕಾಲ್ಪನಿಕತ್ವದ ಭೀತಿಯನ್ನು ಮನಸ್ಸಿನಲ್ಲಿಡಲು ಕಾರಣವಿಲ್ಲ. ಕ್ರಿ. ಶ. ೧೬೪೬ನೆಯ ವರ್ಷದಲ್ಲಿ ರಾಮದಾಸರಿಗೂ ಶಿವಾಜಿಗೂ ಸಂದರ್ಶನವಾಯಿತೋ ಇಲ್ಲವೋ? ಎಂಬುದೊಂದು ವಾದಗ್ರಸ್ತಪ್ರಶ್ನೆಯಾಗಿದೆ. ಆದರೆ ಅಸ್ತಿಪಕ್ಷೀಯವಾದ ಉತ್ತರವೇ ನಿಜವೆಂದು ಈ ಪುಸ್ತಕದಲ್ಲಿ ಎಣಿಸಲ್ಪಟ್ಟಿದೆ. ಆದದರಿಂದ ನಾಸ್ತಿಪಕ್ಷೀಯರಾದ ಇತಿಹಾಸಜ್ಞರು ಕ್ಷಮಿಸುವರೆಂದು ನಂಬಿದ್ದೇವೆ.

ಎಲ್ಲಕ್ಕೂ ಮೊದಲು ಇದಕ್ಕೆ 'ಪತಿತೋದ್ಧಾರ' ಎಂಬ ಹೆಸರಿತ್ತು. ಆದರೆ ಸಂಘುಸಂಸ್ಕರಣಕ್ಕೆ ಸಂಬಂಧಪಟ್ಟ ಉಪನ್ಯಾಸರೂಪವಾದ ಅದೇ ಹೆಸರಿನ ಚಿಕ್ಕದೊಂದು ಪುಸ್ತಕವಿದ್ದುದು ತಿಳಿದ ಬಳಿಕ 'ಪತಿತಪರಾವರ್ತನ' ಎಂಬ ನಾಮಧೇಯದಿಂದ ಇದನ್ನು 'ಮಧುರವಾಣಿ'ಯಲ್ಲಿ ಪ್ರಕಟಿಸಿದ್ದೆವು. ಆದರೆ ಇದರ ಪ್ರಸಾರವು ಸಾಕಷ್ಟು ಆಗಲಿಲ್ಲವಾದದರಿಂದ ಮತ್ತೆ ಪ್ರಕಟಿಸಿದ್ದೇವೆ. ಈಗ 'ಪತಿತೋದ್ಧಾರ' ಕ್ಕೆ 'ಶುದ್ಧಿ-ಸಂಘಟನ' ವೆಂಬ ಶಬ್ದವು ಎಲ್ಲೆಡೆಯಲ್ಲಿಯೂ ರೂಢವಾಗಿರುವದರಿಂದ ಆ ಎರಡನೆಯ ಹೆಸರನ್ನು ಬಿಟ್ಟು ಬಿಟ್ಟು ಈ ಹೊಸ ಹೆಸರಿಟ್ಟೆವು. ಇನ್ನು ಪುಸ್ತಕದ ಅಂತರಂಗದಲ್ಲಿ ಕೇವಲ ಭಾಷೆಗೆ ಸಂಬಂಧಪಟ್ಟ ಕೆಲವು ಸಣ್ಣಪುಟ್ಟ ತಿದ್ದುಪಡಿಗಳನ್ನು ಮಾಡಿದ್ದೇವೆ. ಮೂಲಲೇಖಕರಾದ ಶ್ರೀ. ನಾ. ಕೇ. ಬೇಹರೆ ಎಮ್. ಎ. ಬೀ. ಎಸ್, ಸೀ. ಎಲ್. ಟೀ. ಇವರಿಗೆ ಮತ್ತೊಮ್ಮೆ ಕೃತಜ್ಞತೆಯನ್ನು ವ್ಯಕ್ತಗೊಳಿಸುವದಲ್ಲದೆ, ದೇವತಾಸ್ವರೂಪರಾದ ಮಾತಾಮಹಿಯುವರ ಆತ್ಮಕ್ಕೆ ಇದನ್ನು ಭಕ್ತಿಭಾವದಿಂದ ಸಮರ್ಪಿಸಿದ್ದೇವೆ.

**ಶಾರದೆ**'ಯ ಮೇಲಿನ ಮಮತೆಯಿಂದ ಪುಸ್ತಕವನ್ನು ಅಂದವಾಗಿ ಸಕಾಲದಲ್ಲಿ ಮುದ್ರಿಸಿಕೊಟ್ಟದ್ದಕ್ಕಾಗಿ 'ಕರ್ನಾಟಕ ಪ್ರಿಂಟಿಂಗ ವರ್ಕ್ಸ' ಮುದ್ರಣಾಲಯದ ಒಡೆಯರಾದ **ಶ್ರೀ ಯ. ಭಾ. ಜತಾರ** ಬಿ. ಎ., ಎಲ್‌ಎಲ್. ಬೀ. ಇವರಿಗೂ, ವ್ಯವಸ್ಥಾಪಕರಾದ **ಶ್ರೀ. ಮಾ. ಕೃ. ಜೋಶಿ** ಇವರಿಗೂ ಅತ್ಯಂತ ಕೃತಜ್ಞರಾಗಿದ್ದೇವೆ.

ಇನ್ನು '**ಶಾರದೆ**'ಯ ವಿಷಯಕ್ಕೆ ಒಂದು ಮಾತು. ಅವಳು ಗ್ರಾಹಕರಿಂದ ಬಯಸುವ ಒಂದು ವರ್ಷದ ಬೆಲೆ ೧-೪-೦ ಅದರಲ್ಲಿ ಮೇಲಿನ ೪ಆ. ಅಂಚೆಯ ವೆಚ್ಚಕ್ಕೆ ಹೋಗುನವು. ಅಂದರೆ ನಿಜವಾಗಿ ಸಂಪಾದಕರ ಕೈಸೇರತಕ್ಕದ್ದು ಒಂದೇ ರೂಪಾಯಿ. ಹೀಗಿದ್ದರೂ ೧ ರೂ. ಬೆಲೆಯ ಪುಸ್ತಕವನ್ನು ಅವಳು ಈಗಳೇ ವಾಚಕರಿಗೆ ಅರ್ಪಿಸಿದಳು! ಇನ್ನು ಹತ್ತು ತಿಂಗಳುಗಳ ವರೆಗೆ ಅವಳು ಏನನ್ನೂ ಅಪೇಕ್ಷಿಸದೆ ಗ್ರಾಹಕಮಹಾಶಯರ ಮನೆಯಲ್ಲಿ ಎಡೆಯಾಡುವಳು! ಬಡವೆಯಾದ ಶಾರದೆಯು ಈ ಸಾಹಸವನ್ನು ನೋಡಿ ಕನ್ನಡಿಗರು ಸ್ವಪರ ಹಸ್ತಗಳಿಂದ ನೆರವಾಗಿ ಅವಳಿಗೆ ಹುರುಪುಗೊಟ್ಟು ಕೆಲಸಮಾಡಿಸಿಕೊಳ್ಳುವರೆಂದು ಆಶಿಸುವೆವು; ಮತ್ತು ಸರ್ವರಿಗೂ ಮಂಗಲವನ್ನುಂಟುಮಾಡೆಂದು ಪರಮಾತ್ಮನನ್ನು ಪ್ರಾರ್ಥಿಸುವೆವು.

—ಸಂಪಾದಕ

---

॥ ಶ್ರೀ ॥



# ಶುದ್ಧಿ-ಸಂಘಟನ



## ಮೊದಲನೆಯ ಪ್ರಕರಣ

### ಶಿವಾಜಿಯ ಕಾಲದ ಮಹಾರಾಷ್ಟ್ರದೇಶವು





ನಮ್ಮ ಕಥಾನಕದ ಕಾಲದಲ್ಲಿ ಮಹಾರಾಷ್ಟ್ರದೇಶವು ಊರ್ಜಿತಸ್ಥಿತಿಯಲ್ಲಿತ್ತೆಂದು ಹೇಳಲಿಕ್ಕಾಗುವದಿಲ್ಲ; ಯಾಕೆಂದರೆ, ವ್ಯಾಪಾರಪ್ರಸಾರದ ಸಾಧನಗಳು ಈಗಿನಂತೆ ಆ ಕಾಲದಲ್ಲಿ ಪ್ರಚಾರವಲ್ಲಿರಲಿಲ್ಲ. ಆ ಕಾಲವು ದೇಶದೊಳಗಿನ ವಿದ್ವತ್ತೆಯ ನಿದರ್ಶಕವಾಗಿತ್ತೆಂದೂ ಹೇಳಲಿಕ್ಕೆ ಬರುವಂತಿಲ್ಲ ; ಯಾಕಂದರೆ ಈಗಿನಂತಹ ಸುಶಿಕ್ಷಿತರನ್ನೂ ಪದವೀಧರರನ್ನೂ ಸಿದ್ಧಮಾಡುವ ಸಾಲೆಗಳೂ ವಿದ್ಯಾನಿಲಯಗಳೂ ಆ ಕಾಲದಲ್ಲಿದ್ದಿಲ್ಲ. ಆದರೆ, ಸಾಂಪ್ರತಕಾಲದಲ್ಲಿ ಎಲ್ಲಿಯೂ ಗೋಚರವಾಗದಿರುವ ಒಂದು ಸಂಗತಿಯು ಆ ಕಾಲದಲ್ಲಿತ್ತು. ಈಗಿನ ಕಾಲಕ್ಕೆ ಸ್ವಪ್ನದಂತೆ ತೋರುವ ವಿಷಯಗಳು ಆ ಕಾಲದಲ್ಲಿ ನಿಜವಾಗಿಯೂ ಸಂಭವಿಸುತ್ತಿದ್ದುವು. ಪ್ರಕೃತಕ್ಕೆ ಕಾಗದದಲ್ಲಿಯೇ ಜೀವಿಸಿರುವ ಕಥಾಕಾದಂಬರಿಗಳು ಆ ಕಾಲದಲ್ಲಿ ಪ್ರತ್ಯಕ್ಷಸೃಷ್ಟಿಯಲ್ಲಿಯೇ ಓದಲು ದೊರೆಯುತ್ತಿದ್ದುವು. ಈಗಿನ ಕಾಲದಂತಹ ಕಾದಂಬರೀಲೇಖಕರು ತತ್ಕಾಲದಲ್ಲಿ ಇದ್ದಿಲ್ಲ. ಆದರೆ, ತಮ್ಮ ಶೌರ್ಯದಿಂದ ನಿಜವಾದ ಕಾದಂಬರಿಯನ್ನು ಉತ್ಪನ್ನಮಾಡುವ ವೀರರು ಆ ಕಾಲದ ಮಹಾ

ರಾಷ್ಟ್ರದೇಶವಲ್ಲಿ ಪ್ರಕಾಶಿಸುತ್ತಿದ್ದರು. ಆಗಿನ ಕಾಲದ ಲೇಖಕರ ಲೆಕ್ಕಣಿಕೆಯೊಳ ಗಿಂದ ನಾಯಕ–ನಾಯಿಕೆಯರ ಕಥಾನಕಗಳು ಈಗಿನಂತೆ ಉದ್ಭೂತವಾಗುತ್ತಿದ್ದಿಲ್ಲ; ಆದರೆ ಖಡ್ಗದ ಸಾಮರ್ಥ್ಯದಿಂದ ವೀರನಾಯಕನಾಗುವ ಪ್ರತಿಜ್ಞೆಮಾಡುವಂತಹ ಶೂರಪುರುಷರೂ, ಕತ್ತಿಯ ಶಕ್ತಿಯಿಂದ ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುವಂತಹ ನಾರೀಮಣಿಗಳೂ ಆಗ ತಮ್ಮ ತೇಜಸ್ಸಿನಿಂದ ಮೆರೆಯುತ್ತಿದ್ದರು.

ಇಂತಹ ಆ ಕಾಲದಲ್ಲಿ ಮಹಾರಾಷ್ಟ್ರದ ಭಾಗ್ಯೋದಯಕ್ಕೆ ಆರಂಭವಾಗಿತ್ತು. ಮರಾಟರು ಅಜ್ಞಾನನಿದ್ರೆಯನ್ನು ತೊರೆದು ಕಣ್ದೆರೆಸುತ್ತ ಏಳುವ ಆಲೋಚನೆಯಲ್ಲಿದ್ದರು. ಐನೂರು ವರುಷಗಳ ವರೆಗೆ ಮುಸಲ್ಮಾನರ ಆಧಿಪತ್ಯಕ್ಕೆ ಅಧೀನರಾಗಿದ್ದ ಮೂಲಕ ಮರಾಟರ ಸತ್ವವು ಇಲ್ಲದಂತಾಗಿತ್ತು; ಆತ್ಮಪರಿಚಯವನ್ನೇ ಅವರು ಮರೆತು ಬಿಟ್ಟಿದ್ದರು; ಅಜ್ಞಾನನಿದ್ರೆಯು ಅವರನ್ನು ಆವರಿಸಿತ್ತು. ಅದನ್ನು ಹಾಳುಮಾಡುವಂತಹ ಜನರು ಆ ಕಾಲದಲ್ಲಿ ಜನ್ಮಿಸಿದರು. ತರುಣವಯಸ್ಕರಾದ ಹುಡುಗರು ಮಹಾರಾಷ್ಟ್ರದೇಶಕ್ಕೆ ಸ್ವಾತಂತ್ರ್ಯವನ್ನುಂಟುಮಾಡುವವಕ್ಕಾಗಿಯೂ, ಹಿಂದೂಧರ್ಮವನ್ನು ಉದ್ಧರಿಸುವದಕ್ಕಾಗಿಯೂ,ಗೋ–ಬ್ರಾಹ್ಮಣರನ್ನು ರಕ್ಷಿಸುವದಕ್ಕಾಗಿಯೂ ಬದ್ಧಪರಿಕರರಾಗಿದ್ದರು. ಆ ತರುಣರ ತಂದೆ ತಾಯಿಗಳೂ, ಹಿತಚಿಂತಕರೂ ಅವರನ್ನು ಹಾಸ್ಯಮಾಡತೊಡಗಿದರು. “ಈ ಹುಡುಗರು ಕೆಟ್ಟರು; ತಮ್ಮ ತಂದೆತಾಯಿಗಳ ಮೋರೆಗೆ ಮಸಿಹಚ್ಚುವರು; ವಂಶಕ್ಕೆ ಕಲಂಕವನ್ನು ತೊಡೆಯುವರು.” ಈ ಪ್ರಕಾರದ ಮಾತುಗಳಿಂದ ಜನರು ಅವರನ್ನು ನಿಂದಿಸಹತ್ತಿದರು. ಆ ಕಾಲದ ಜನರ ದೃಷ್ಟಿಯಿಂದ ಈ ನಿಂದೆಯು ಯೋಗ್ಯವಾಗಿಯೇ ಇತ್ತು. ಯಾಕೆಂದರೆ, ಮುಸಲ್ಮಾನರು ಕಾಲಿನಿಂದ ಸರಿಸಿದುದನ್ನು ಆನಂದದಿಂದ ತಿಂದು ಅವರಿಗೆ ವಿಜಯವನ್ನುಂಟುಮಾಡುವವಕ್ಕೋಸ್ಕರವಾಗಿಯೂ, ಅವರ ಸೇವಾವೃತ್ತಿಯನ್ನು ದೊರಕಿಸುವದಕ್ಕಾಗಿಯೂ, ಅವರ ಮಹತ್ವಾಕಾಂಕ್ಷೆಯನ್ನು ಪೂರೈಸುವದಕ್ಕಾಗಿಯೂ ಸಾಯುವ ವರೆಗೆ ಎಲವು ಸಣ್ಣ ಮಾಡಿಕೊಂಡು ಪ್ರಾಣವನ್ನು ಕೂಡ ಕಳೆದುಕೊಳ್ಳಲು ನಿಂತ ಹೆಜ್ಜೆಯ ಮೇಲೆಯೇ ಸಿದ್ಧರಾಗಿದ್ದು, ಸ್ವಾಮಿಭಕ್ತರೆಂಬ ಅದ್ಭುತವಾದ ಹೆಸರಿನಿಂದ ಕರೆಯಿಸಿಕೊಳ್ಳುವುದೇ ಆಗಿನಕಾಲದ ಪ್ರತಿಯೊಬ್ಬ ಮರಾಟನ ಗುರುಮಂತ್ರವಾಗಿತ್ತು! ಮುಸಲ್ಮಾನರ ಅಧಿಕಾರದ ವಿರುದ್ಧವಾಗಿಯೂ, ಅವರ ದುರಾಗ್ರಹದ ವಿರುದ್ಧವಾಗಿಯೂ ಒಂದು ಅಕ್ಷರವನ್ನು ಕೂಡ ಯಾವನೂ ಮಾತಾಡುವಂತಿದ್ದಿಲ್ಲ; ಅಂತಹನು ರಾಜದ್ರೋಹಿಯೆಂದೂ, ಉಂಡಮನೆಯ ಗಳ ಎಣಿಸುವವನೆಂದೂ ಕೃತಘ್ನ

ನೆಂದೂ ತಿಳಿಯುವ ಪರಿಪಾಠವು ಮೊದಲಿನಿಂದಲೂ ಮರಾಟರಲ್ಲಿ ರೂಢವಾಗಿತ್ತು. ಸಾಲೆಯೊಳಗಿನ ಹುಡುಗರು ಈ ವ್ಯಾಖ್ಯೆಯನ್ನೇ ಪಾಠಮಾಡುತ್ತಿದ್ದರು; ತಂದೆ ತಾಯಿಗಳು ಈ ವ್ಯಾಖ್ಯೆಯನ್ನೇ ಪ್ರತಿದಿನವೂ ಮಕ್ಕಳಿಂದ ಅನ್ನಿಸುತ್ತಿದ್ದರು ಇಂತಹ ರೂಢಿಗೆ ವಿರುದ್ಧವಾಗಿ ಗೊಂದಲವನ್ನೆಬ್ಬಿಸಿದ ಮೊಗವೋಸೆಯು ಕೂಡ ಒಡೆಯದೆ ಇದ್ದ ಹುಡುಗರನ್ನು ಜನರು ಹಾಸ್ಯಮಾಡಿದುದರಲ್ಲಿ ಆಶ್ಚರ್ಯ ವೇನು ? "ನಾವು ತಿನ್ನುವ ಅನ್ನವು ನಮ್ಮದೇ; ನಾವು ವಾಸಮಾಡುವ ದೇಶವು ನಮ್ಮದೇ; ಆದುದರಿಂದ ನಮ್ಮ ದೇಶದ ಮೇಲೆ ನಮ್ಮ ಅಧಿಕಾರವೇ ನಡೆಯತಕ್ಕದ್ದು." ಎಂದು ಹುರುಪಿನಿಂದ ಪ್ರತಿಪಾದಿಸುವ ಮತ್ತು ಅದರಂತೆ ವರ್ತಿಸುವ ನವಯುವಕರು ವಿಜಾಪುರದ ಅದಿಲಶಾಹಿಯ ವಿರುದ್ಧವಾಗಿ ಕಾದಾಟವನ್ನು ಸೂಚಿಸುವ ಬಾವುಟವನ್ನು ನಿಲ್ಲಿಸಿದುದನ್ನು ನೋಡಿ ಯಾರು ನಗಲಿಕ್ಕಿಲ್ಲ ?

ಆದರೆ ಆ ಹುಡುಗರ ಧೈರ್ಯವು ಅದ್ವಿತೀಯವಾಗಿತ್ತು; ಅವರ ಆತ್ಮವಿಶ್ವಾಸವಾದರೂ ದೃಢವಾಗಿತ್ತು. ತಮ್ಮ ಅಭಿಪ್ರಾಯವನ್ನು ಬರಿಯ ಮಾತುಗಳಿಂದ ವ್ಯಕ್ತಬಡಿಸದೆ, ಕೃತಿಯಿಂದಲೂ ಅದನ್ನು ಜನರ ಮನಸ್ಸಿನಲ್ಲಿ ಬಿಂಬಿಸುವದಕ್ಕೋಸ್ಕರ ಅವರು ನಡುಕಟ್ಟಿ ನಿಂತರು. ಮರಾಟರು ನಿದ್ದೆಯಿಂದೆದ್ದು ತಮ್ಮ ಕರ್ತವ್ಯಕ್ಕೋಸ್ಕರ ಜಾಗೃತರಾಗಬೇಕೆಂಬ ಉದ್ದೇಶದಿಂದಲೇ ಅವರು ಯುದ್ಧದ ಪತಾಕೆಯನ್ನು ನಿಲ್ಲಿಸಿದರು; ರಣಕಹಳೆಯನ್ನು ಊದಿದರು. ತೋರಣಾಕೋಟೆಯ ಮೇಲೆ ವಿಜಯತೋರಣವನ್ನು ಕಟ್ಟಿದರು. ಆದರೆ ಅವರ ರಣಗರ್ಜನೆಯು ವೃದ್ಧರಿಗೆ ಕೇಳಿಸಲಿಲ್ಲ; ವೃದ್ಧರು ಅತ್ತಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ; ಆ ತರುಣರು ಸಾಹಾಯ್ಯಕ್ಕೋಸ್ಕರ ಕರೆಯಲು ಮಹಾರಾಷ್ಟ್ರಸರದಾರರೂ ಅವರಿಗೆ ನೆರವಾಗಲಿಲ್ಲ, ವಂಶಪರಂಪರೆಯಾಗಿ ಮುಸಲ್ಮಾನರ ಸೇವೆಮಾಡುತ್ತ ಬಂದುದರಿಂದ ಅವರ ವಿರುದ್ಧವಾಗಿ ಬಂಡಾಯವನ್ನೆಬ್ಬಿಸಿದವರಿಗೆ ಸಾಹಾಯ್ಯಮಾಡುವುದು ರಾಜದ್ರೋಹವೆಂದು ಆಗಿನ ಜನರು ತಿಳಿಯುತ್ತಿದ್ದರು. ಆದುದರಿಂದ ಕೃತಘ್ನರಾಗಲು ಅವರ ಮನಸ್ಸು ಒಪ್ಪಲಿಲ್ಲ. ನಾವು ತಿನ್ನುವ ಅನ್ನವು ವಿಜಾಪುರದ ಅದಿಲಶಾಹೀ ಬಾದಶಹರದಾಗಿರದೆ, ನಮ್ಮದಾಗಿದೆಯೆಂಬ ತರುಣರ ಯುಕ್ತಿವಾದವು ಆ ಸರದಾರರಿಗೆ ರುಚಿಸಲಿಲ್ಲ. ಅವರು ವಿಜಾಪುರದ ರಾಜನಿಷ್ಠಸೇವಕರಾಗಿಯೇ ಉಳಿದರು.

ಹಾಗಾದರೆ, ಆ ತರುಣರಿಗೆ ಆರು ನೆರವಾದರು ? ಅವರಂತೆಯೇ ಉಚ್ಛೃಂಖಲರಾದ ಹುಡುಗರೇ ಅವರಿಗೆ ಸಹಾಯರಾಗಲು ಓಡಿ ಬಂದರು. ಅವರು ತಮ್ಮ ಬಾಲಮಿತ್ರರನ್ನು ಸೇರಿದರು. ತರುಣರ ಯುಕ್ತಿವಾದವು ಅವರ ಮನಸ್ಸಿಗೆ

ಯೋಗ್ಯವೆಂದೆನಿಸಿತು. ಆದುದರಿಂದ, ಎಲ್ಲರೂ ಕೂಡಿ ತೋರಣಾಕೋಟೆಯನ್ನು ವಶಮಾಡಿಕೊಂಡರು. ಅವರನ್ನು ಈ ಕೆಲಸದಿಂದ ನಿವೃತ್ತರನ್ನಾಗಿ ಮಾಡಬೇಕೆಂದು ಜನರು ಬಹಳ ಪ್ರಯತ್ನಮಾಡಿದರು. ಅವರ ತಾಯಿತಂದೆಗಳು ಅವರನ್ನು ಬೆದರಿಸಿದರು; ಮಿತ್ರರು ಉಪದೇಶಮಾಡಿದರು; ನೆರೆಹೊರೆಯವರು ಶಿವಾಜಿಯ ಸಂಗತಿಯಿಂದಾಗುವ ದುಷ್ಪರಿಣಾಮವನ್ನು ಉಪ್ಪುಕಾರಹಚ್ಚಿ ವರ್ಣಿಸತೊಡಗಿದರು. ಆದರೆ ಆ ಹುಡುಗರು ಸಂಕಟಗಳಿಗೆ ಹೆದರಲಿಲ್ಲ. ಮತ್ತು ಮುಸಲ್ಮಾನರ ರಾಜನಿಷ್ಠಸೇವಕರಾಗಿರುವುದರಿಂದ ದೊರೆಯಬಹುದಾದ ಅನ್ನದ ಅಗುಳಿಗೂ ಮಾನಕ್ಕೂ ಆಶಿಸಲಿಲ್ಲ. ಆದುದರಿಂದ ನಿರ್ಭಯದಿಂದಲೇ ತೋರಣಾಕೋಟೆಯ ಮೇಲೆ ದಂಡೆತ್ತಿಹೋಗಿ ಅವರು ವಿಜಯತೋರಣವನ್ನಲ್ಲಿ ಕಟ್ಟಿದರು. ಇವರ ವಿಷಯವಾಗಿ ವೃದ್ಧರಿಗೆ ಸಹಾನುಭೂತಿಯುಂಟಾಯಿತು. ಮೂರ್ಖರಾದ ಈ ಹುಡುಗರು ತಿಳಿಯದೆ ಅವಿಚಾರದ ಕೆಲಸವನ್ನು ಮಾಡಿ ಹಾನಿಗೊಳಗಾಗುವರೆಂದು ಅವರು ಹಳಹಳಿಸಿದರು ! ಮತ್ತು ವಿಜಾಪುರದ ಬಾದಶಹನು ಬಂಡುಗಾರರಾದ ಇತರರಿಗೆ ದೇಹಾಂತಶಿಕ್ಷೆಯನ್ನು ವಿಧಿಸಿದರೆ ಏನುಮಾಡುವಿರೆಂಬ ಪ್ರಶ್ನವನ್ನು, ನೆರೆಹೊರೆಯುವರೂ ಹಿತಚಿಂತಕರೂ ಅವರ ತಂದೆತಾಯಿಗಳಿಗೆ ಕೇಳಹತ್ತಿದರು !

ಆ ತರುಣರು ತಂದೆ ತಾಯಿಗಳ ದೃಷ್ಟಿಯಿಂದ ಹುಚ್ಚರೆನಿಸಿದರು; ಸಂಬಂಧಿಕರ ದೃಷ್ಟಿಯಿಂದ ಗೌರವಸ್ಥರಲ್ಲವೆಂದು ಹೇಳಿಸಿಕೊಂಡರು; ಮತ್ತು ಅಧಿಕಾರಿಗಳ ದೃಷ್ಟಿಯಿಂದ ಅವಿಧೇಯರಾದರು ! ಆದರೆ ಇತಿಹಾಸದ ದೃಷ್ಟಿಯಿಂದ ಇವರಿಗೆ ಪ್ರಾಪ್ತವಾದ ಹೆಸರಾವುದು? 'ಯೇಶಾ'ನಿಗೆ ' ನರದಾರ ಯೇಸಾಜಿ ಕಂಕ ' ಎಂಬ ಹೆಸರೂ 'ತಾನ್ಯಾ'ನಿಗೆ 'ನರವೀರ ತಾನಾಜಿ ಮಾಲಸುರೆ' ಎಂಬ ಹೆಸರೂ '**ಭೋಸಲೆ**'ಯ ಮಗನಾದ 'ಶಿವಾಜಿ'ಗೆ '**ಪರಮೇಶ್ವರನ ಅವತಾರ**'ವೆಂಬ ಪದವಿಯೂ ಪ್ರಾಪ್ತವಾಯಿತು! ಶಿವಾಜಿಯ ಹೆಸರಿನ ಹಿಂದೆ '**ಶ್ರೀ**'ಎಂಬ ಉಪಪದವು ಸ್ಥಿರವಾಗಿ ಉಳಿಯಿತು ! ಆತನೇ ಮಹಾರಾಷ್ಟ್ರ ರಾಜ್ಯದ ಸಂಸ್ಥಾಪಕನು! ಆತನೇ ಮಹಾರಾಷ್ಟ್ರದ ಉದ್ಧಾರಕನು ! ಆತನೇ ಗೋಬ್ರಾಹ್ಮಣರ ಪ್ರತಿಪಾಲಕನು ! ಆತನೇ ಹಿಂದುಸ್ಥಾನದ ಸ್ವರಾಜ್ಯದ ಪುರಸ್ಕರ್ತೃವು ! ಆತನೇ ಹಿಂದೂಧರ್ಮದ ನಾಯಕನು !!!

ಮಹಾರಾಷ್ಟ್ರದ ಈ ಭಾಗ್ಯೋದಯಸಮಯದಲ್ಲಿ ಜಗತ್ತಿನ ರಂಗಭೂಮಿಯಲ್ಲಿ ನಾಟ್ಯವಾಡಿಹೋದ ನಮ್ಮ ಕಥಾನಕದ ಸಂಗತಿಯು ಕಾಗದದ ಸೃಷ್ಟಿಯು

ಲ್ಲಿದ್ದು ಕಾಲವರ್ಣದಿಂದ ಚಿತ್ರಿತವಾಗಿರುವುದರಿಂದ ಅದರ ಯಥಾರ್ಥಕಲ್ಪನೆಯು ಕೇವಲ ಶಬ್ದಗಳಿಂದುಂಟಾಗುವದು ಅಶಕ್ಯವಾಗಿದೆ! ಆ ಕಾಲದ ಚಿತ್ರವು ಯಥಾವತ್ತಾಗಿ ಕಣ್ಣಮುಂದೆ ನಿಲ್ಲಬೇಕಾದರೆ ಕಲ್ಪನಾಶ್ವವನ್ನು ಮನಬಂದಂತೆ ಹೋಗಗೊಟ್ಟ ಹೊರತು ಗತ್ಯಂತರವೇ ಇಲ್ಲ!

ಈ ಕಥೆಯು ಕ್ರಿ. ಶ. ೧೬೫೫-೫೬ನೆಯ ವರುಷದಲ್ಲಿ ಸಂಭವಿಸಿದುದು. ಭೋಸಲೆಯ ಮಗನನ್ನು ಹುಚ್ಚನೆಂದು ಕರೆಯುವ ಜನರು ಆ ಕಾಲದಲ್ಲಿಯೂ ಇದ್ದರು; ಮತ್ತು ಅವನನ್ನೇ ಶಿವನ ಅವತಾರವೆಂದು ತಿಳಿಯುವ ಏಕನಿಷ್ಠರು ಆರೂ ಅದೇ ಸಮಯದಲ್ಲಿ ಜನ್ಮವೆತ್ತಿದರು ಶಿವಾಜಿಯ ತಂದೆಯು ತನ್ನ ಮಗನ ಕೆಲಸವು ಒಳ್ಳೆಯ ಸಾಹಸದ್ದೆಂದೂ, ಪರಿಣಾಮದಲ್ಲಿ ಕಷ್ಟದಾಯಕವಾದದ್ದೆಂದೂ ತಿಳಿದಿದ್ದನು; ಆದರೆ ತನ್ನ ಮಗನು ನಿಜವಾಗಿಯೂ ಹಿಂದುಸ್ಥಾನದಲ್ಲಿ ಸ್ವರಾಜ್ಯವನ್ನು ಸ್ಥಾಪಿಸುವನೆಂದು ಶಿವಾಜಿಯ ತಾಯಿಯು ಮನಃಪೂರ್ವಕವಾಗಿ ಇಚ್ಛಿಸುತ್ತಿದ್ದಳು. ಈಗಿನ ಕಾಲದಲ್ಲಿ ಪ್ರಾಚೀನಸಂತತಿಯವರು ಆದಿಲಶಾಹಿಗೆ ಸಂಬಂಧಿಸಿದವರೂ, ನೂತನಸಂತತಿಯವರು ಶಿವಾಜಿ ಭೋಸಲೇನಿಗೆ ಸಂಬಂಧಿಸಿದವರೂ ಆಗಿದ್ದರು. ತಂದೆಯು ಮುಸಲ್ಮಾನರ ಸ್ವಾಮಿಭಕ್ತನೂ ರಾಜನಿಷ್ಠಸೇವಕನೂ ಆಗಿದ್ದು, ಮಗನು ಮಾತ್ರ ಶಿವಾಜಿಯ ಸೇವಕನೂ ಮಹಾರಾಷ್ಟ್ರದ ಏಕನಿಷ್ಠಭಕ್ತನೂ ಆಗಿದ್ದಂತಹ ವಿಲಕ್ಷಣವಾದ ಪಿತಾಪುತ್ರರ ಚಿತ್ರವನ್ನು ಆಗಿನ ಕಾಲದಲ್ಲಿ ನೋಡಬಹುದಾಗಿತ್ತು. ವಿಜಾಪುರದ ಬಾದಶಹನು ಶಿವಾಜಿಯನ್ನು ದುರ್ಲಕ್ಷಿಸಿದರೆ ನಡೆಯುವಂತಹ ಸ್ಥಿತಿಯು ಆಗಿನ ಕಾಲದಲ್ಲಿದ್ದಿಲ್ಲ. ಇತ್ತ ಶಿವಾಜಿಯಾದರೂ ಮೊಗಲಸಮ್ರಾಜರೊಡನೆ ಸಂಧಾನ ಮಾಡಿ ವಿಜಾಪುರದ ಬಾದಶಹನೊಡನೆ ಪ್ರತ್ಯಕ್ಷವಾಗಿ ಯುದ್ಧಮಾಡಬೇಕೆಂದೆಣಿಸುತ್ತಿದ್ದನು. ಇಂತಹ ಕಾಲದಲ್ಲಿಯೇ ನಮ್ಮ ಕಥಾನಕವು ಆರಂಭವಾಯಿತು. ಪ್ರಾಚೀನರಂತೆ ಅಂಜುಬುರಕರಾಗಿರದೆ ಧೈರ್ಯವಂತರಾಗಬೇಕೆಂಬ ಉತ್ಸುಕತೆಯು ಆಗಿನ ಕಾಲದ ಜನರಲ್ಲಿ ಉತ್ಪನ್ನವಾಗಿತ್ತು. ಒಟ್ಟಿನಲ್ಲಿ ಮಹಾರಾಷ್ಟ್ರದೇಶವು ನಿದ್ರೆಯಿಂದ ಏಳತೊಡಗಿತ್ತು; ಕಾಲಮಾಹಾತ್ಮ್ಯದಿಂದ ಮಹಾರಾಷ್ಟ್ರದೇಶದ ಪ್ರಾಚೀನಸ್ಥಿತಿಯಲ್ಲಿ ಸ್ಥಿತ್ಯಂತರವುಂಟಾಗಿ ನೂತನಪರಿಸ್ಥಿತಿಯು ಅದಕ್ಕೆ ಪ್ರಾಪ್ತವಾಗುವ ಸುಚಿಹ್ನಗಳು ತೋರತೊಡಗಿದ್ದುವು.



## ಎರಡನೆಯ ಪ್ರಕರಣ

### ಜಾತಿಭ್ರಷ್ಟನು!



ಜಾಪುರದೊಳಗಿನ ಒಂದು ಭವ್ಯವಾದ ಮಂದಿರದಲ್ಲಿ ನವಾಬ ಬಜಾಜೀಖಾನನು ಲೋಡಿಗೆ (ಒರಗುದಿಂಬಿಗೆ) ಒರಗಿ ಕುಳಿತು ಕೊಂಡಿದ್ದನು. ಆತನು ಕುಳಿತುಕೊಂಡಿದ್ದ ಗಾದಿಯು ಉತ್ತಮವಾದ ಕಿನಖಾಪಿನಿಂದ ಮಾಡಲ್ಪಟ್ಟಿತ್ತು. ಆತನು ಆತುಕೊಂಡಿದ್ದ ಲೋಡಾದರೂ ಒಳ್ಳೆಯ ಬೆಲೆಯುಳ್ಳ ವಸ್ತ್ರದಿಂದ ಆಚ್ಛಾದಿತವಾಗಿತ್ತು. ಅಲ್ಲಿಯ ಗೋಡೆಗಳ ಮೇಲೆ ಅನೇಕವಿಧವಾದ ಚಿತ್ರಗಳನ್ನು ತೆಗೆದಿದ್ದರು; ಆದರೆ ಆ ಚಿತ್ರಗಳು ರಾಮಾಯಣ ಅಥವಾ ಮಹಾಭಾರತದೊಳಗಿನ ಪ್ರಸಂಗಗಳ ನೋಟಗಳಾಗಿದ್ದಿಲ್ಲ. ಅವೆಲ್ಲವೂ ಮುಸಲ್ಮಾನೀಪದ್ಧತಿಯ ಯುವಕಯುವತಿಯರ ಚಿತ್ರಗಳಾಗಿದ್ದವು. ಚಿತ್ರಗಳು ದರ್ಶನೀಯವಾಗಿದ್ದರೂ, ಸಾತ್ವಿಕಭಾವನೆಯು ಅವುಗಳ ಮುಖಚರ್ಯೆಯ ಮೇಲೆ ಒಪ್ಪುತ್ತಿದ್ದಿಲ್ಲ. ಮುತ್ತಿನ ಸುಣ್ಣದಿಂದ ಆ ಚಿತ್ರಗಳಿಗೆ ಬಣ್ಣವನ್ನು ಕೊಟ್ಟಿದ್ದರು; ಆದರೆ ಆ ಮೂರ್ತಿಗಳ ಮುಖದ ಮೇಲೆ ಮುತ್ತಿನ ಕಾಂತಿಯು ಪ್ರಕಾಶಮಾನವಾಗಿದ್ದಿಲ್ಲ.

ಆ ವಿಶ್ರಾಮಗೃಹದ ನೆಲದಮೇಲೆ ಉತ್ತಮವಾದೊಂದು ರತ್ನಗಂಬಳಿಯನ್ನು ಹಾಸಿದ್ದರು. ಮೇಲ್ಭಾಗದಲ್ಲಿ ವಿಧವಿಧದ ಗುಳಾಪುಗಳನ್ನು ತೂಗಹಾಕಿದ್ದರು; ಈ ಪ್ರಕಾರವಾಗಿ ಅಲ್ಲಿಯ ಬಾಹ್ಯಸೌಂದರ್ಯವು ಮೋಹಕವಾಗಿದ್ದರೂ ನೋಡಿದಲ್ಲೆಲ್ಲ ಉದಾಸೀನತೆಯೇ ಇದ್ದಂತೆ ತೋರುತ್ತಿತ್ತು. ಬಜಾಜೀಖಾನನಿಗೆ ಸಂಸಾರದ ಆವ ವಿಷಯದಲ್ಲಿಯೂ ನ್ಯೂನತೆಯಿದ್ದಿಲ್ಲ. ವಿಜಾಪುರದ ದರಬಾರದಲ್ಲಿ ಬಾದಶಹನ ತರುವಾಯ ಮಾನಾರ್ಹನಾದ ಮನುಷ್ಯನು ಬಜಾಜಿಯೇ! ಆತನು ದೊಡ್ಡ ಸರದಾರನಾಗಿದ್ದನು; ಬಾದಶಹನು ಆತನಿಗೆ ವಿಪುಲವಾದ ಉಂಬಳಿಯನ್ನು ಕೊಟ್ಟಿದ್ದನು; ಆತನ ಸಂಪತ್ತಾದರೂ ಅಪರಿಮಿತವಾಗಿತ್ತು; ಪರಾಕ್ರಮದಲ್ಲಿಯೋ ಆತನ ಸಮಾನರು ಆರೂ ಇದ್ದಿಲ್ಲ; ಆತನ ಕರ್ತೃತ್ವಶಕ್ತಿಯನ್ನೂ, ಸೈನ್ಯದ ವ್ಯವಸ್ಥೆಯನ್ನೂ ನೋಡಿ ಬಾದಶಹನು ತನ್ನ ಮಗಳಾದ ರೋಷನಳನ್ನು ಆತನಿಗೆ ವಿವಾಹಮಾಡಿಕೊಟ್ಟಿದ್ದನು. ಈ ಆಪ್ತತ್ವದ ಮೂಲಕ ಬಜಾಜೀಖಾನನ ಮಾನಮರ್ಯಾದೆಯು ಅಧಿಕವಾಯಿತು. ಆತನು ಒಳ್ಳೆಯ ಐಶ್ವರ್ಯವಂತನಾದನು. ಜನರೆಲ್ಲರೂ ಆದಿಲಶಾಯಿಯ ಆಧಾರಸ್ತಂಭವೆಂದು

ಆತನನ್ನು ತಿಳಿಯಹತ್ತಿದರು. ಬಾದಶಹನಿಗಾದರೋ ಆತನು ಮನೆಯ ಅಳಿಯನಾಗಿದ್ದನು. ಆದುದರಿಂದ ಬಾದಶಹನಿಂದ ಆತನಿಗೆ ಬಹುಮಾನದೊರೆಯುತ್ತಿದ್ದುದರಲ್ಲಿ ಆಶ್ಚರ್ಯವೇನು ? ಅದರಲ್ಲಿಯೂ ಬಜಾಜೀಖಾನನ ದರ್ಪಕ್ಕೆ ಬಾದಶಹನು ಒಳಗಿಂದೊಳಗೇ ಹೆದರಿದ್ದನು; ಅಂದಮೇಲೆ ಕೇಳುವದೇನು ?

ಬಜಾಜೀಖಾನನು ವೈಭವದಿಂದ ದೊಡ್ಡವನಾಗಿದ್ದರೂ, ಸೌಖ್ಯದಿಂದ ಚಿಕ್ಕವನೇ ಇದ್ದನು. ದುಡ್ಡಿನಿಂದ ಎಲ್ಲ ಕಾರ್ಯಗಳೂ ಸಾಧಿಸುತ್ತವೆಂದು ಹೇಳುತ್ತಾರೆ; ಆದರೆ ಈ ಮಾತು ಬಜಾಜೀಖಾನನ ವಿಷಯದಲ್ಲಿ ಅಷ್ಟೊಂದು ಸಮಂಜಸವಾಗಿದ್ದಿಲ್ಲ. ಈ ವೇಳೆಯಲ್ಲಿ ಬಜಾಜೀಖಾನನು ಗುಡುಗುಡಿಯ ಉದ್ದವಾದ ನಲಿಕೆಯನ್ನು ಕಯ್ಯಲ್ಲಿ ಹಿಡಿದು ಸ್ವಸ್ಥಚಿತ್ತದಿಂದ ಅದರ ಹೊಗೆಯನ್ನು ಹೊರಗೆ ಡಹುತ್ತ ಬಿದ್ದುಕೊಂಡಿದ್ದನು; ಆ ಗುಡುಗುಡಿಯಿಂದ ಆತನ ಹೃದಯದಲ್ಲಿ ವೇದನೆಗಳು ಮಾತ್ರ ಹುಟ್ಟುತ್ತಿದ್ದುವು. ಆತನ ಮುಖವು ಖಿನ್ನವಾಗಿತ್ತು. ಗುಡುಗುಡಿಯ ತರಂಗಗಳು ಹೆಚ್ಚಾದಂತೆ ಆತನ ಖಿನ್ನತೆಯೂ ಬೆಳೆಯುತ್ತಿತ್ತು; ಪ್ರತಿಯೊಂದು ತರಂಗದಿಂದ ಆತನ ಮುಖಮುದ್ರೆಯ ಮೇಲೆ ವಿಲಕ್ಷಣವಾದೊಂದು ಸ್ಥಿತ್ಯಂತರವು ಉಂಟಾಗುತ್ತಿತ್ತು.

ಬಜಾಜೀಖಾನನು ಈ ಪ್ರಕಾರ ಗೂಢವಿಚಾರದಲ್ಲಿ ಮಗ್ನನಾಗಿರಲು ಆವುದೋ ಒಂದು ಸಪ್ಪಳವು ಆತನಿಗೆ ಕೇಳಿಸಿತು; ಕೂಡಲೇ ಎಚ್ಚತ್ತನು; ಕಯ್ಯೊಳಗಿನ ನಲಿಕೆಯು ಕೆಳಗೆ ಬಿತ್ತು. ತನ್ನ ದರ್ಶನಕ್ಕಾಗಿ ಆರು ಬಂದರೂ ಈ ಕೋಣೆಯಲ್ಲಿ ಅವರನ್ನು ಬಿಡಲಾಗದೆಂದು ದ್ವಾರಪಾಲಕರಿಗೆ ಮಾಡಿದ ಕಟ್ಟಪ್ಪಣೆಯನ್ನು ಮೀರಿದ ಸಾಹಸಿಕರಾರೆಂಬುದನ್ನು ತಿಳಿದುಕೊಳ್ಳುವ ಉದ್ದೇಶದಿಂದ ಆತನು ಕೋಪದಿಂದ ಮೇಲಕ್ಕೆ ಮೊಗವೆತ್ತಿ ನೋಡಿದನು. ರೋಷನಬೇಗಮಳು ಮಂದಸ್ಮಿತದಿಂದ ಆತನ ಕಣ್ಣೆದುರಿಗೆ ಬಂದು ನಿಂತಳು !

ಬಜಾಜೀಖಾನನ ಕೋಪವು ಶಾಂತವಾಗಲು ವಿಷಾದದ ಚಿಹ್ನವು ಮೊದಲಿನಂತೆ ಆತನ ಮುಖದಮೇಲೆ ಪಸರಿಸಿತು. ಆದರೂ, ಆ ವಿಷಾದವನ್ನು ಹೊರಗೆ ತೋರ್ಪಡಿಸದೆ ಆತನು ಮಾತನಾಡಿದನು. "ಸುಂದರೀ, ಈ ವೇಳೆಯಲ್ಲಿ ಇಂದು ಇಲ್ಲಿ ಯಾಕೆ ಬಂದೆ? ನಿನ್ನ ಸಖಿಯರು ಮಾತನಾಡಲು ಈಹೊತ್ತು ಬಂದಿಲ್ಲವೇನು?"

ಬಜಾಜೀಖಾನನು ನಗುವ ಪ್ರಯತ್ನ ಮಾಡಿದನು; ಆದರೆ ಆ ನಗುವಿನೊಳಗಿನ ದಾಂಭಿಕತೆಯು ಚಿಕ್ಕಮಗುವಿಗಾದರೂ ತಿಳಿಯುವಂತಿತ್ತು. ಬಜಾಜೀಖಾನನ ಉದಾಸಮುಖಮುದ್ರೆಯನ್ನು ನೋಡಿ ಬೇಗಮಳಿಗೆ ವ್ಯಸನವಾಯಿತು.

ಆಗಲವಳು ಇಂತು ನುಡಿದಳು. "ತಾವು ಹೀಗೆ ದುಃಖದಿಂದ ಬಳಲುತ್ತಿರಲು, ನಾನು ಸಖಿಯರೊಡನೆ ಹಾಸ್ಯವಿನೋದದಲ್ಲಿ ಕಾಲಕಳೆದರೆ ನನಗೆ ಸುಖವಾಗುವದೆಂದು ತಿಳಿದಿರುವಿರೋ?"

**ಬಜಾಜಿ:**—ನಾನು ದುಃಖಪಡುತ್ತಿರುವೆನೆಂಬ ಮಾತೇ ಸುಳ್ಳು! ಈ ಸುಳ್ಳು ಮಾತನ್ನು ನಿನಗೆ ಆರು ಹೇಳಿದರು? ನಾನಾದರೋ, ಸುಖವಾಗಿಯೇ ಇದ್ದೇನೆ.

ಇಷ್ಟು ಮಾತನಾಡಿ ಖಾನನು ಪ್ರಯತ್ನಪೂರ್ವಕವಾಗಿ ಮೊಗದ ಮೇಲೆ ನಗೆಯನ್ನು ತೋರಿಸಿದನು!

**ರೋಷನ:**—ತಮ್ಮ ಮುಖಮುದ್ರೆಯೇ ತಮಗಿರುವ ದುಃಖವನ್ನು ತೋರ್ಪಡಿಸುತ್ತಿದೆ. ತಾವು ನಗುವುದಕ್ಕೆ ಹೆಚ್ಚುಹೆಚ್ಚಾಗಿ ಪ್ರಯತ್ನಮಾಡಿದಂತೆ ತಮ್ಮ ಹೃದಯದೊಳಗಿನ ವ್ಯಸನವು ಅಧಿಕಾಧಿಕವಾಗಿ ಸ್ಪಷ್ಟವಾಗುತ್ತಿದೆ. ಇಷ್ಟು ದಿವಸಗಳ ವರೆಗೆ ತಮ್ಮ ಸಹವಾಸದಲ್ಲಿದ್ದರೂ ನನಗೆ ತಮ್ಮ ಸ್ವಭಾವಪರಿಚಯವು ಇಷ್ಟುಮಟ್ಟಿಗಾದರೂ ಆಗಿಲ್ಲವೆಂದು ತಿಳಿದಿರುವಿರೋ?

**ಬಜಾಜಿ:**—ಅರೇ, ಅಲ್ಲಾ! ಹೆಂಗಸರು ಬಹಳ ಹಟಮಾರಿಗಳು! ಅವರು ಯಾವದೊಂದು ಮಾತನ್ನು ಮನಸ್ಸಿನಲ್ಲಿ ಹಿಡಿದರೆಂದರೆ ಪ್ರತ್ಯಕ್ಷ ಬ್ರಹ್ಮದೇವರು - ಅಲ್ಲಲ್ಲ, ಅಲ್ಲಾನು-ಮೇಲಿನಿಂದ ಕೆಳಗೆ ಇಳಿದು ಬಂದರೂ ಅವರು ಆ ಹಟವನ್ನು ಬಿಡುವುದಿಲ್ಲ. ಈ ಸಾಮಾನ್ಯನಿಯಮಕ್ಕೆ ರೋಷನಳು ಅಪವಾದವಾಗುವದು ಹೇಗೆ? ನಾನು ದುಃಖಪಡುತ್ತಿರುವೆನೆಂದು ಅವಳೇನೋ ಒಮ್ಮೆ ತಿಳಿದುಕೊಂಡಿರುವಳು! ಅದು ಕೊನೆಗೂ ವಜ್ರಲೇಪವೇ! ನಾನು ಸುಖವಾಗಿದ್ದೇನೆಂದು ಎಷ್ಟು ಹೇಳಿಕೊಂಡರೂ ಅವಳು ತನ್ನ ಹಟವನ್ನು ಬಿಟ್ಟುದುಂಟೆ?

**ರೋಷನ:**— ತಮ್ಮ ಮಾತು ನಿಜವೆಂದು ಹೇಗೆ ನಂಬಲಿ? ಯಾವ ಬಜಾಜೀಖಾನರ ದರಬಾರದಲ್ಲಿ ಜನಸಂದಣಿಯು ಯಾವಾಗಲೂ ಇರುತ್ತಿತ್ತೋ, ಅಂತಹರು ಮಟಮಟ ಮಧ್ಯಾಹ್ನದಲ್ಲಿ ಒಬ್ಬರೇ ಕುಳಿತುಕೊಳ್ಳುತ್ತಾರೆ? ಇಷ್ಟೇ ಅಲ್ಲ; ಆಳುಮಕ್ಕಳೇ ಆಗಲಿ ಆರೇ ಆಗಲಿ, ಒಳಗೆ ಇಣಿಕಿ ಸಹ ನೋಡದಂತೆ ವ್ಯವಸ್ಥೆಯನ್ನಿಟ್ಟಿರುತ್ತಾರೆ! ಯಾವ ಮಂದಿರವು ವಿವಾಹಗೃಹದಂತೆ ಬರುಹೋಗುವ ಜನರ ದಟ್ಟಣೆಯಿಂದ ತುಂಬಿರುತ್ತಿತ್ತೊ, ಅದರಲ್ಲಿ ಈಗ ಸ್ಮಶಾನದಂತೆ ಭಯಂಕರವಾದ ಸ್ತಬ್ಧತೆಯು ತುಂಬಿಹೋಗಿದೆ! ಕಾರ್ಯಬಾಹುಲ್ಯದ ಮೂಲಕ ಯಾವ ಬಜಾಜೀಖಾನರಿಗೆ ತಮ್ಮ ಪ್ರಿಯಬೇಗಮ್ಮಳ ಕಯ್ಯಿಂದ ವೀಳ್ಯವನ್ನು ತೆಗೆದು

ಕೊಳ್ಳುವುದಕ್ಕೆ ಕೂಡ ಅವಕಾಶವು ಸಿಕ್ಕುತ್ತಿದ್ದಿಲ್ಲವೋ, ಅವರೇ ಈಗ ತಾಸುಗಳ ಎಣಿಕೆಯಿಲ್ಲದಂತೆ ಒಂದೇ ಸಮನೆ ಗುಡುಗುಡಿಯನ್ನು ಸೇದುತ್ತ ಬಿದ್ದುಕೊಳ್ಳುತ್ತಾರೆ! ಯಾವ ಬಜಾಜೀಖಾನರ ಕಯ್ಯು ಕತ್ತಿಯನ್ನೆತ್ತಿಕೊಂಡು ಅವಿಶ್ರಾಂತವಾಗಿ ತನ್ನ ಪರಾಕ್ರಮವನ್ನು ಪ್ರಕಾಶಪಡಿಸುತ್ತಿತ್ತೋ, ಅದೇ ಕಯ್ಯು ಈಗ ಗುಡುಗುಡಿಯ ನಲಿಕೆಗೆ ಅಧೀನವಾಗಿದೆ! ಇವೆಲ್ಲ ಲಕ್ಷಣಗಳನ್ನು ನೋಡಿದ ಮನುಷ್ಯನು ಇನ್ನಾವ ಕಲ್ಪನೆಯನ್ನು ಮಾಡಬಲ್ಲನು !!!

ಮಾತನಾಡುತ್ತಾಡುತ್ತ ಬೇಗಮಳ ಕುತ್ತಿಗೆಯ ನರಗಳು ಉಗಿದುವು, ಅವಳಿಂದ ಮುಂದೆ ಮಾತಾಡುವುದಕ್ಕಾಗಲಿಲ್ಲ, ಇದನ್ನು ಕಂಡು ಬಜಾಜೀಖಾನನು ರೋಷನಳನ್ನು ತನ್ನ ಸಮೀಪಕ್ಕೆ ಎಳೆದುಕೊಂಡು ಮಾತನಾಡಿದನು—

"ಪ್ರಿಯೇ ! ಮನುಷ್ಯನು ಕೆಲಸಮಾಡಿ ದಣಿದನೆಂದರೆ ಆತನಿಗೆ ವಿಶ್ರಾಂತಿಯು ಬೇಕಾಗುತ್ತದೆ. ಆದುದರಿಂದ, ಅಂತಹ ಮನುಷ್ಯನು ಏಕಾಂತದಲ್ಲಿ ಕುಳಿತುಕೊಂಡರೆ ಆತನು ದುಃಖಬಡುತ್ತಿರುವನೆಂದು ಕಲ್ಪಿಸುವುದು ತಪ್ಪು. ನಾನು ದುಃಖಬಡಲಿಕ್ಕೆ ಕಾರಣವಾದರೂ ಏನು ? ನಾನು ವಿಜಾಪುರದ ಬಾದಶಹನ ಅಳಿಯನು ! ಮೇಲಾಗಿ ಅದಿಲಶಾಹೀರಾಜ್ಯಕ್ಕೆ ಆಧಾರಸ್ತಂಭವಾಗಿದ್ದೇನೆ ! ವಿಜಾಪುರದಲ್ಲಿಯೇ ಯಾಕೆ, ಇಡೀ ಮಹಾರಾಷ್ಟ್ರಕರ್ನಾಟಕ ಪ್ರಾಂತಗಳಲ್ಲಿ ನನಗೆ ಸಮನಾದ ಸರದಾರನು ಯಾವನೂ ಇಲ್ಲ! ಇವೆಲ್ಲಕ್ಕೂ ಹೆಚ್ಚಿನ ಮಾತೆಂದರೆ ಈ ಪ್ರಾಂತದದಲ್ಲೆಲ್ಲ ತನ್ನ ಸೌಂದರ್ಯಾತಿಶಯದಿಂದ ಸುಪ್ರಸಿದ್ಧಳಾದ ರೋಷನ ಬೇಗಮಳಿಗೆ ನಾನು ಪತಿಯೆಂಬುದು !!! ಶಹಾಜಹಾನನಿಗೆ ಮಮತಾಜಮಹಾಲಳು ಹೇಗಿದ್ದಳೋ, ಹಾಗೆಯೇ ಬಾಜಾಜೀಖಾನನಿಗೆ ರೋಷನಳು ! ಅವಳಂತೆಯೇ ಸುಂದರಿ, ಅವಳಂತೆಯೇ ವಿನಯಶೀಲೆ, ಅವಳಂತೆಯೇ ಪ್ರೇಮಳೆ! ಇಂತಹ ಅಪೂರ್ವಸಂಪತ್ತನ್ನುಳ್ಳ, ನನಗೆ ವ್ಯಸನವಾಗಲು ಕಾರಣವಾದರೂ ಏನು ? ಪ್ರಿಯತಮೇ, ನೀನೇ ಹೇಳು. ನಾನನ್ನುವುದರಲ್ಲಿ ಎಳ್ಳಷ್ಟಾದರೂ ಸುಳ್ಳಿದೆಯೇ ? ಸುಂದರೀ, ನನ್ನಂತಹ ಭಾಗ್ಯವಂತನು......"

ಬಜಾಜೀಖಾನನು ತನ್ನ ವಾಕ್ಯವನ್ನು ಮುಗಿಸಲು ಸಮರ್ಥನಾಗಲಿಲ್ಲ. ರೋಷನಬೇಗಮೆಯ ಕಣ್ಣೊಳಗಿಂದ ಬಾಷ್ಪಗಳು ಸುರಿಯತೊಡಗಿದುವು. ಅವಳು ಬಿಕ್ಕುತ್ತ ಬಿಕ್ಕುತ್ತ "ಆದರೆ, ಆದರೆ, ಆದರೆ" ಎಂದು ನುಡಿಯುತ್ತಿದ್ದಳು; ಆದರೆ ದುಃಖಾವೇಗದ ಮೂಲಕ ಅಭಿಪ್ರಾಯವನ್ನು ಪೂರ್ಣವಾಗಿ ವ್ಯಕ್ತಬಡಿಸುವುದು ಅವಳಿಂದಾಗಲಿಲ್ಲ. ಅದನ್ನು ನೋಡಿ ಖಾನನು ಅತ್ಯಂತಪ್ರೇಮದಿಂದ

ಆಕೆಯ ಮೊಗವನ್ನು ಚುಂಬಿಸಿದನು; ಮತ್ತು ಅವಳನ್ನು ಸಮಾಧಾನಗೊಳಿಸುವ ಉದ್ದೇಶದಿಂದ ಮಾತನಾಡಿದನು :—

"ಹುಚ್ಚೀ, ದರಿದ್ರರಾದವರು 'ಆದರೆ, ಆದರೆ' ಎಂದು ಬಡಬಡಿಸಬೇಕು! ಈ ಬಜಾಜೀಖಾನನೂ ಈತನ ಪ್ರಿಯೆಯೂ 'ಆದರೆ' ಎಂದುಚ್ಚರಿಸಲು ಕಾರಣವೇನು? ಸಾಕ್ಷಾತ್ ಸೈತಾನನು ನಮ್ಮ ಎದುರಿಗೆ ಬಂದು ನಿಂತರೂ ನಮ್ಮ ಸೌಖ್ಯದಲ್ಲಿ 'ಆದರೆ' ಎಂಬುದನ್ನು ಸಮಾವೇಶಬಡಿಸಲು ಸಮರ್ಥನಾಗಲಾರನು! ಅಂದಮೇಲೆ ಇತರರ ಪಾಡೇನು? ಪ್ರಿಯೇ, ಹೀಗೇಕೆ ಹುಚ್ಚಿಯಂತೆ ಮಾಡುವೆ? ನಿನ್ನ ಸೌಖ್ಯದಲ್ಲಿ ಯಾವ ಕೊರತೆಯುಂಟಾಗಿದೆ?"

ಬೇಗಮಳು ದೊಡ್ಡದನಿಯಿಂದ ಬಿಕ್ಕಿ ಬಿಕ್ಕಿ ಅಳಹತ್ತಿದಳು; ಮತ್ತು ಅದೇ ದನಿಯಿಂದಲೇ ಮಾತನಾಡಲಾರಂಭಿಸಿದಳು—

"ಪ್ರಾಣನಾಥ! ನನ್ನ ಸೌಖ್ಯದಲ್ಲಿ ವ್ಯತ್ಯಯವನ್ನುಂಟುಮಾಡುವ ಸಾಹಸವನ್ನು ಯಾವನು ಮಾಡಬಲ್ಲನು! ಸಿಂಹನಂತೆ ಪರಾಕ್ರಮಿಗಳೂ, ಎರಳೆಯಂತೆ ಪ್ರೇಮಲರೂ ಆದ ತಮ್ಮ ಬೆಂಬಲವಿರಲು ನನಗೆ ಅದಾವ ಕೊರತೆಯುಂಟಾಗುವುದು? ವಿಜಾಪುರದ ಅದಿಲಶಾಹಿಯು ತಮ್ಮ ಎದುರಿಗೆ ಕೈಕಟ್ಟಿಕೊಂಡು ನಿಂತಿರುವಾಗ ನನಗಾವ ವಿಷಯವು ಅಸಾಧ್ಯವಾಗುವುದು? ಆದರೆ, ಪ್ರಿಯಾ......"

**ಬಜಾಜಿ:**— ಪ್ರಾಣಕಾಂತೇ! 'ಆದರೆ' ಎಂದು ಮತ್ತೆ ನುಡಿಯುತ್ತೀಯಲ್ಲ! ನಿನಗಾವ ಅಪೇಕ್ಷೆಯಿರುವದೆಂಬುದನ್ನು ಈ ಬಜಾಜೀಖಾನನಿಗೆ ಅಪ್ಪಣೆ ಕೊಡು, ಕ್ಷಣಾರ್ಧದಲ್ಲಿ ಅದನ್ನು ನಿನ್ನ ಮುಂದ ತಂದಿರಿಸುತ್ತೇನೆ.

**ರೋಷನ:**—ನಾಥಾ, ನಾನು ತಮ್ಮ ಪರಾಕ್ರಮದ ವಿಷಯಕ್ಕೆ ಸಂದೇಹ ಬಡುವುದಿಲ್ಲ. ಆದರೇನುಮಾಡಲಿ? ನಾನು ನಿಪುತ್ರಿಕಳಾಗಿಯೇ ಇರಬೇಕೆಂದು ಈಶಸಂಕಲ್ಪವಿದ್ದಮೇಲೆ ನಾನೇನು ಮಾಡಬಲ್ಲೆನು? ಪವಿತ್ರವೂ ಶುದ್ಧವೂ ಆದ ತಮ್ಮ ಪ್ರೇಮದ ಫಲವು ಲಭಿಸಬಾರದೆಂದೇ ಆ ಭಗವಂತನ ಇಚ್ಛೆಯಿದ್ದರೆ ಆರೇನುಮಾಡುವರು? ತಮ್ಮ ಹೃದಯವನ್ನು ನಾನು ತಿಳಿದಿದ್ದೇನೆ. ಈ ಮಾತೇ ತಮ್ಮ ಮನಸ್ಸಿಗೆ ಶಲ್ಯದಂತೆ ಚುಚ್ಚುತ್ತಿದೆ; ಇದರಿಂದಲೇ ಬಜಾಜೀಖಾನರ ಸೌಖ್ಯವು ಮಣ್ಣುಪಾಲಾಗಿದೆ, ಆದುದರಿಂದ ಇದರಿಂದಲೇ ಬಜಾಜೀಖಾನರ ದೃಷ್ಟಿಗೆ ಈ ಬೇಗಮಳು ದಿನದಿನಕ್ಕೆ ಕೆಟ್ಟವಳಾಗಿ ತೋರಹತ್ತುವಳೋ, ಏನೋ ಎಂಬ ಭೀತಿಯು ನನ್ನ ಮನಸ್ಸಿನಲ್ಲಿ ಹುಟ್ಟಿದೆ! ನನಗೆ ಮಕ್ಕಳಾಗಲಿಲ್ಲವೆಂದು ಅಷ್ಟೇನೂ ವ್ಯಸನವಾಗುವುದಿಲ್ಲ; ಆದರೆ ನಿಪುತ್ರಿಕಳಾದ ನಾನು ತಮ್ಮ ಮನಸ್ಸನ್ನು

ಹೇಗೆ ರಮಿಸಬಲ್ಲೆನೆಂಬುವೇ ನನಗೆ ಬಲವಾದ ಚಿಂತೆ !! ಪ್ರಾಣಾಧಿಕಾ, ನಾನು ತಮ್ಮ ಪ್ರೇಮಜಲವನ್ನಾಶಿಸಿ ಬಂದ ಆಕಳವು ! ತಮ್ಮ ಪ್ರೇಮುವನ್ನೆಲ್ಲಿ ಕಳೆದು-ಕೊಳ್ಳುವೆನೋ ಎಂದು ನಾನು ಬಹಳ ಅಂಜಿದ್ದೇನೆ. ಸಂತಾನರಹಿತೆಯೆಂದು ನನ್ನನ್ನು ತಾವು ತಿರಸ್ಕರಿಸುವದಿಲ್ಲವಷ್ಟೇ ? ತಮಗೆ ಕೈಜೋಡಿಸುತ್ತೇನೆ; ಸೆರ-ಗೊಡ್ಡುತ್ತೇನೆ; ಸಾಷ್ಟಾಂಗವಾಗಿ ನಮಸ್ಕರಿಸುತ್ತೇನೆ.

ರೋಷನಳು ನಿಜವಾಗಿಯೂ ಖಾನನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ-ದಳು; ಆಕೆಯು ಅಲ್ಲಿಯೇ ಮೂರ್ಛಿತಳಾದಳು !

ಖಾನನು ಆಕೆಯನ್ನು ಮೆಲ್ಲನೆ ಎಬ್ಬಿಸಿ ಅಪ್ಪಿಕೊಂಡನು; ಆ ಸುಖಸ್ಪರ್ಶ ದಿಂದ ರೋಷನಳು ಮೆಲ್ಲಮೆಲ್ಲನೆ ಎಚ್ಚತ್ತಳು; ಬಜಾಜಿಯು ಮೇಲಿಂದ ಮೇಲೆ ಆಕೆಯನ್ನು ಮುದ್ದಿಡುತ್ತ ಕಣ್ಣೀರುಗಳನ್ನು ಒರಿಸಹತ್ತಿದನು. ಮತ್ತು ಅವಳನ್ನು ಕುರಿತು ಹೀಗೆ ಹೇಳಿದನು.

“ಕಾಂತೇ ! ನಿನ್ನ ಸಂಶಯವು ವ್ಯರ್ಥವಾಗಿದೆ ! ನಾನು ಒಮ್ಮೆ ಯಾವ ಳಿಗೆ ನನ್ನ ಪ್ರೇಮುವನ್ನು ಸಮರ್ಪಿಸಿದೆನೋ, ಅವಳನ್ನು ಪರಿತ್ಯಜಿಸುವುದು ಅಸಂ-ಭವನೀಯವಾಗಿದೆ. ಇದು ಮರಾಟರಿಗೆ ಶೋಭಿಸತಕ್ಕುದಲ್ಲ ! ನಾನು ನಿಜವಾ ಗಿಯೂ ಮರಾಟನು ! ಈ ಶರೀರದಲ್ಲಿ ಜೀವವಿರುವ ವರೆಗೂ ಬಜಾಜೀ ನಿಂಬಾಳ ಕರನು ನಿನ್ನನ್ನು ಮರೆಯಲಿಕ್ಕಿಲ್ಲ ಕಂಡೆಯಾ ! ಮೂಡಲ ಸೂರ್ಯನು ಪಡು-ವಲಿಗೆ ಮೂಡಿದರೂ ಮೂಡಬಹುದು; ಆದರೆ ಈ ನಿಂಬಾಳಕರನು ನಿನ್ನನ್ನು ಎಂದೂ ತ್ಯಾಗಮಾಡಲಿಕ್ಕಿಲ್ಲ ! ಸುಂದರೀ, ನಾನು...”

**ರೋಷನ**:— ಹಾಯ್ ! ಹಾಯ !! ದೇವಾ, ಕೊನೆಗೆ ನನ್ನ ಭೀತಿಯೇ ನಿಜವಾಯಿತೇ ? ತಾವು ಬಜಾಜೀಖಾನರಲ್ಲವೆ ? ತಾವು ಬಾದಶಹನ ಅಳಿಯರ ಲ್ಲವೆ ? ರೋಷನಬೇಗಮುಗಳ ಪ್ರಾಣನಾಥರೂ ಅಲ್ಲವೆ ? ತಾವು ಈ ಸಂಗತಿಯ ನ್ನೆಲ್ಲ ಮರೆತು ಬಿಟ್ಟಿರಾ ? ತಾವು ಮುಸಲ್ಮಾನರಲ್ಲವೆ? ಪ್ರಾಣಪ್ರಿಯಾ, ಇನ್ನೊಮ್ಮೆ ಹೇಳಿರಿ; ತಾವು ನನ್ನವರೇ ಅಲ್ಲವೆ ? ಅದಿಲಶಾಹಿಯ ಆಧಾರಸ್ತಂಭವಲ್ಲವೆ ?

ಒಂದು ನಿಟ್ಟುಸಿರನ್ನು ಬಿಟ್ಟು ಬಜಾಜೀಖಾನನು ಮಾತನಾಡಿದನು :— “ರೋಷನ, ನೀನು ಹೇಳಿದುದೇ ನಿಜ ! ನಾನು ಮರಾಟನಲ್ಲ; ಮುಸಲ್ಮಾನನು. ನಾನು ಬಾದಶಹನ ಅಳಿಯನು; ರೋಷನ ಬೇಗಮುಳ ಗಂಡನು; ನಾನು ಮರಾಟ ನಲ್ಲ; ಆದರೆ, ಮರಾಟರ ವೈರಿಯು ! ನಾನು ಮುಸಲ್ಮಾನನು ! ಮರಾಟರ ಶತ್ರುವು ! ನನ್ನನ್ನು ಕ್ಷಮಿಸು. ನನಗೆ ಹಿಂದಿನ ಸ್ವಪ್ನವು ನೆನಪಾಗಿತ್ತು. ಆ

ಸ್ವಪ್ನದಲ್ಲಿ ನಾನು ಮರಾಟನಾಗಿದ್ದೆನು; ನಿಂಬಾಳಕರನಾಗಿದ್ದೆನು; ನಿಜವಾದ ಹಿಂದುವಾಗಿದ್ದೆನು."

**ರೋಷನ**:— ಪ್ರಾಣಪತಿಳೇ, ಈಗ ಆ ಸ್ವಪ್ನದ ಸ್ಮರಣೆಯು ಏತಕ್ಕೆ ಬೇಕು! ತಾವು ಈಗ ಅರಸುಮನೆತನದವರಾಗಿರುವಿರಿ! ತಾವು ಈಗ ವಿಜಯಶಾಲಿಗಳಾದ ಮುಸಲ್ಮಾನರು! ಪರಾಜಿತರಾದ ಮರಾಟರಲ್ಲ! ತಾವು ವಿಜಯಿಗಳು! ಪರಾಜಿತರ ಮೇಲೆ ಅಧಿಕಾರವನ್ನು ನಡಿಸುವ ಶೂರರು!

ಬಜಾಜೀಖಾನನ ಮುಖದ ಮೇಲೆ ಕೃಷ್ಣಚ್ಛಾಯೆಯು ಪಸರಿಸಿತು; ಆದರೂ ಆತನು ಮೃದುಸ್ವರದಿಂದ ಮಾತನಾಡಿದನು— "ಪ್ರಿಯೇ, ಚೆನ್ನಾಗಿ ನೆನಪು ಮಾಡಿದೆ. ನಾನು ಮರಾಟರಲ್ಲಿ ಹುಟ್ಟಿದ್ದರೂ, ಈಗ ಮುಸಲ್ಮಾನನಾಗಿದ್ದೇನೆ. ನಾನು ಮರಾಟರ ಶತ್ರುವಾಗಿದ್ದೇನೆ. ನಾನು ಬಾದಶಹನ ಅಳಿಯನು! ರೋಷನಳ ಗಂಡನು! ನಿಂಬಾಳಕರನಿಗೂ ನನಗೂ ಸಂಬಂಧವೇನು? ಆತನು ನಾಸ್ತಿಕನು! ನಾನು ನಿಜವಾದ ಮುಸಲ್ಮಾನನು! ಆತನು ಕೃತಘ್ನನು! ನಾನು ಧರ್ಮಶೀಲನು! ರಮಣೀ, ನಾನು ಮುಸಲ್ಮಾನನೇ ಆಗಿದ್ದೇನೆ."

ರೋಷನಳು ಮನದಲ್ಲಿಯೇ ಅಂದುಕೊಂಡಳು:— "ನನ್ನ ಸಂದೇಹವು ಸುಳ್ಳಲ್ಲ. ಮುಸಲ್ಮಾನರಾದುದರಿಂದ ಇವರ ಮನಸ್ಸಿಗೆ ಪಶ್ಚಾತ್ತಾಪವಾಗುತ್ತಿರಬಹುದು! ನನಗೆ ಒಂದು ಮಗುವು ಜನಿಸಿದ್ದರೆ—ಹಾಯ! ದೇವಾ, ಇವರಿಗೆ ಪಶ್ಚಾತ್ತಾಪವಾಗಗೊಡದಿದ್ದರೆ ಮಾತ್ರ ಇವರ ಪ್ರೇಮವು ನನ್ನ ಮೇಲೆ ಸ್ಥಿರವಾಗಿ ಉಳಿಯುವುದು; ರೋಷನ್, ಚೆನ್ನಾಗಿ ಪ್ರಯತ್ನಮಾಡು. ಇಲ್ಲದಿದ್ದರೆ ಕಯ್ಗೆ ಬಂದ ಈ ತುತ್ತನ್ನು ಕಳೆದುಕೊಂಡು ಅಳುತ್ತ ಕುಳಿತುಕೊಳ್ಳಬೇಕಾದೀತು."

ರೋಷನಳು ತನ್ನ ಮೃದುವಾದ ಹಸ್ತವೆಂಬ ಪಾಶದಿಂದ ಬಜಾಜೀಖಾನನ ಕೊರಳನ್ನು ಬಿಗಿದಳು. ಪ್ರೇಮಪಾಶವನ್ನಾರು ಹರಿಯಬಲ್ಲರು! ಎರಡೂ ಕೈಯ್ಗಳಿಂದ ಖಾನನ ಕೊರಳಿಗೆ ನೇತುಬಿದ್ದು ರೋಷನಳು ತನ್ನ ಮೊಗವನ್ನು ಮೇಲಕ್ಕೆತ್ತಿದಳು. ! ಇಬ್ಬರ ತುಟಿಗಳೂ ಸಮ್ಮಿಲಿತವಾದವು!!!

ಆ ಸುಂದರಿಯ ದರ್ಶನದಿಂದ ಬಜಾಜೀಖಾನನ ಮೈಮೇಲಿನ ಎಚ್ಚರವು ತಪ್ಪಿತು. ಪ್ರೇಮಭರದಿಂದ ಆತನು ಮಾತಾಡಿದನು:—"ರಮಣೀ, ಅಮೌಲ್ಯವಾದ ಈ ರತ್ನವು ಸಿಕ್ಕಬೇಕಾದರೆ ತಪಶ್ಚರ್ಯವನ್ನೇ ಮಾಡಬೇಕಾಗುವದು. ಗಲ್ಲದ ಮೇಲಿನ ಈ ರಕ್ತಿಮೆಯು—"

'ಇಶ್, ಎಂದು ಬೇಗಮಳು ತನ್ನ ಕಾಲನ್ನು ಸಹಜವಾಗಿಯೇ ಜೋರಿ

ನಿಂದ ಅಪ್ಪಳಿಸಿದಳು. ಆಕೆಯು ಒಯ್ಯಾರವನ್ನು ನೋಡಿ ಬಜಾಜೀಖಾನನು ಹುಚ್ಚಾದನು. ಆಕೆಯು ಕಾಲೊಳಗಿನ ನೂಪುರಗಳ ಮಂಜುಲಸ್ವರದಿಂದ ಮೋಹಿತನಾದನು. ಈ ಪ್ರಕಾರವಾಗಿ ಮನಸೋತುಹೋದ ಬಜಾಜೀಖಾನನು ರೋಷನಳನ್ನು ಕುರಿತು ಏನನ್ನೋ ಕೇಳಬೇಕೆಂದಿದ್ದನು. ಇಷ್ಟರಲ್ಲಿಯೇ ಮೊದಲೇ ಮಾಡಿಕೊಂಡ ಸಂಕೇತದಂತೆ ದಾಸಿಯರು ಅಲ್ಲಿ ಬಂದರು. ಅವರ ಸುಂದರವಾದ ಉಡುಪಿನಿಂದಲೂ, ಮಂಜುಲವಾದ ಮಾತಿನಿಂದಲೂ, ಒಯ್ಯಾರದ ನಡಿಗೆಯಿಂದಲೂ, ಮಧುರವಾದ ಗಾಯನದಿಂದಲೂ ಆರು ತಾನೆ ಮೋಹಿತರಾಗಲಿಕ್ಕಿಲ್ಲ? ಅಂತಹರು ಕೋಮಲವಾದ ಕರಗಳಿಂದ ಸಮರ್ಪಣಮಾಡಿದ ಶೀತಲವಾದ ಪೇಯವನ್ನು ಬಜಾಜೀಖಾನನು ಅಮೃತಸದೃಶವೆಂದು ಅಂಗೀಕರಿಸಿದುದರಲ್ಲಿ ಆಶ್ಚರ್ಯವೇನು !

ಅಲ್ಪಾವಧಿಯಲ್ಲಿಯೇ ಖಾನನ ವಿಶ್ರಾಮಗೃಹದಲ್ಲಿ ವಿಲಾಸದೇವತೆಯು ಮನೋಹರವಾಗಿ ನರ್ತನತೊಡಗಿದಳು!!

---

## ಮೂರನೆಯ ಪ್ರಕರಣ

### ಪ್ರತಿಜ್ಞೆ



ಶಹಾಜಿ ಭೋಸಲೆಯ ಮಗನಾದ ಶಿವಾಜಿಯ ವರ್ತನವು ವಿಜಾಪುರದ ಬಾದಶಹನಿಗೆ ದಿನದಿನಕ್ಕೆ ಹೆಚ್ಚು ಹೆಚ್ಚು ದುಸ್ಸಹವಾಯಿತು. ತೋರಣಾಕೋಟೆಯನ್ನು ವಶಮಾಡಿಕೊಂಡಾಗ ಶಿವಾಜಿಗೆ ಇನ್ನೂ ಇಪ್ಪತ್ತು ವರುಷಗಳು ಮೀರಿದ್ದಿಲ್ಲ. ಸಾರಾಸಾರವಿಚಾರವಿಲ್ಲದ ಈ ಚಿಕ್ಕ ಹುಡುಗನಿಂದೇನಾದೀತೆಂದು ವಿಜಾಪುರದ ಬಾದಶಹನು ಆ ಕಾಲಕ್ಕೆ ದುರ್ಲಕ್ಷ್ಯಮಾಡಿದ್ದನು. ಅದರಂತೆಯೇ ಶಿವಾಜಿಯ ಹುಡುಗತನವು ಬೆಳೆಯುತ್ತಲೇ ಇತ್ತು. ಆತನು ಒಂದರ ಹಿಂದೊಂದು ಕೋಟೆಗಳನ್ನು ವಶಮಾಡಿಕೊಳ್ಳುತ್ತ ನಡೆದನು; ಹೊಸಹೊಸ ದುರ್ಗಗಳನ್ನು ಕಟ್ಟಿದನು; ದೊಡ್ಡ ದೊಡ್ಡ ಸೈನ್ಯಗಳನ್ನು ಕೂಡಿಸಿದನು; ವಂಶಪರಂಪರೆಯಿಂದ ವಿಜಾಪುರದ ಸರದಾರರಾಗಿದ್ದ ಮುಸಲ್ಮಾನರ ಉಂಬಳಿಗಳನ್ನು ಲೂಟಿಮಾಡುವದಕ್ಕೆ ಆರಂಭಿಸಿದನು. ಇದೆಲ್ಲವೂ ವಿಜಾಪುರದ ಬಾದಶಹನಿಗೆ ಸಹನವಾಗುವದು ಅಶಕ್ಯವಾಯಿತು. ಶಿವಾಜಿಯು ಈಗ ಮೊದಲಿನಂತೆ ಹುಡುಗನಾಗಿದ್ದಿಲ್ಲ. ಆತನಿಗೆ ಈಗ ಸುಮಾರು ಮೂವತ್ತು ವರುಷಗಳಾಗಿದ್ದುವು. ಅಂದ ಮೇಲೆ ಅವನ ಅತ್ಯಾಚಾರವು ವಿಜಾಪುರದ ಬಾದಶಹನಿಗೆ

ಹೇಗೆ ಸಹನವಾಗಬೇಕು ? ಆತನು ಶಿವಾಜಿಗೆ ಪತ್ರವನ್ನು ಬರೆದನು; ದೂತರ ಮುಖಾಂತರವಾಗಿ ಬೆದರಿಸಿ ನೋಡಿದನು. ಆದರೆ ಶಿವಾಜಿಯು ಆತನ ಯಾವ ಉಪಾಯಗಳಿಗೂ ಲಕ್ಷ್ಯಗೊಡಲಿಲ್ಲ; ಭಯಭೀತನಾಗಲಿಲ್ಲ; ಆ ಉಪಾಯಗಳಿಂದ ಆತನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಉಂಟಾಗಲಿಲ್ಲ; ಬಾದಶಹನ ಪತ್ರಗಳಿಗೆ ಆತನು ಉತ್ತರವನ್ನೇ ಕೊಡುತ್ತಿದ್ದಿಲ್ಲ; ಕೊಟ್ಟರೂ ತಾನು ಮಾಡುವ ಪ್ರತಿಯೊಂದು ಕಾರ್ಯವನ್ನೂ ವಿಜಾಪುರದ ಬಾದಶಹನ ಹಿತಕ್ಕೋಸುಗವೇ ಮಾಡುತ್ತೇನೆಂದು ಸ್ಪಷ್ಟವಾಗಿ ಬರೆಯುತ್ತಿದ್ದನು. ದೂರದೂರದ ಪ್ರಾಂತಗಳ ವ್ಯವಸ್ಥೆಯು ವಿಜಾಪುರದ ಬಾದಶಹನಿಂದ ಸರಿಯಾಗಿ ಆಗುವದಿಲ್ಲವಾದುದರಿಂದ ಆ ಪ್ರಾಂತಗಳನ್ನು ಕೇವಲ ಸದಿಚ್ಛೆಯಿಂದಲೇ ನಾನು ವಶಮಾಡಿಕೊಂಡಿದ್ದೇನೆಂದು ಶಿವಾಜಿಯು ಬಾದಶಹನ ಮನಸ್ಸಿಗೆ ನಡುವಂತೆ ಸಾರುತ್ತಿದ್ದನು. "ನಾನು ಕೋಟೆಗಳನ್ನು ಕಟ್ಟುವದು ನಿಮ್ಮ ಹಿತಕ್ಕಾಗಿಯೇ; ಸೈನ್ಯಗಳನ್ನಿಡುವದು ನಿಮ್ಮ ಭದ್ರತೆಗೋಸ್ಕರವಾಗಿಯೇ; ಪ್ರಾಂತಗಳನ್ನು ಗೆಲ್ಲುವದೂ ನಿಮ್ಮ ವೈಭವಕ್ಕೋಸುಗವೇ; ಬಹಳ ಹೇಳುವದೇನು ? ನಾನು ನಿಮ್ಮ ಬೊಕ್ಕಸಗಳನ್ನು ಲೂಟಿಮಾಡುವದು ಕೂಡ ನಿಮ್ಮ ಕಲ್ಯಾಣಕ್ಕಾಗಿಯೇ !" ಎಂದು ಶಿವಾಜಿಯು ಅತಿಸ್ಪಷ್ಟವಾಗಿ ಹೇಳತೊಡಗಿದನು. ಶಿವಾಜಿಯ ಈ ಸಾಹಸದ ವಿಚಾರಸರಣಿಯನ್ನು ಕೇಳಿ ಕೌತುಕಬಡುವ ದಿವಸಗಳು ಈಗ ಕಳೆದುಹೋಗಿದ್ದುವು. ಯಾಕಂದರೆ ಶಿವಾಜಿಯು ಔದ್ಧತ್ಯದ ಕೆಲಸಗಳಿಂದ ವಿಜಾಪುರದ ರಾಜ್ಯಕ್ಕೆ ಅಳಿಗಾಲವು ಪ್ರಾಪ್ತವಾಗುವ ಲಕ್ಷಣಗಳು ತೋರಹತ್ತಿದುವು. ವಿಜಾಪುರದ ಬಾದಶಹನಿಗೆ ಒಳಿತಾಗಲೆಂದೇ ನಾನು ಈ ಪ್ರಕಾರ ವರ್ತಿಸುತ್ತೇನೆಂದು ಶಿವಾಜಿಯೇನೋ ಹೇಳುತ್ತಿದ್ದನು; ಆದರೆ ಆತನ ಪಾಳಯದ ಜನರು ವಿಜಾಪುರದವರ ಬೊಕ್ಕಸಗಳನ್ನು ಮನಬಂದಂತೆ ಲೂಟಿಮಾಡುತ್ತಿದ್ದರು. ಶಿವಾಜಿಯು ಮುಸಲ್ಮಾನರಿಗೆ ಉತ್ತರ ಕೊಡುವಾಗ ಅವರ ಮಾತನ್ನು ಅವರ ಕೊರಳಲ್ಲಿಯೇ ಕಟ್ಟುತ್ತಿದ್ದನು. "ನಮಗೆ ರಾಜ್ಯದ ಮೇಲೆ ಅಭಿಲಾಷೆಯಿಲ್ಲ; ಅಧಿಕಾರದ ಅಪೇಕ್ಷೆಯಿಲ್ಲ; ಕೋಟೆಗಳ ಒಡೆಯರಾಗಬೇಕೆಂಬ ಇಚ್ಛೆಯಿಲ್ಲ. ಆದರೆ ಹಿಂದೂಜನರಿಗೆ ರಾಜ್ಯಭಾರಹೊರುವದಕ್ಕೆ ಬರುವದಿಲ್ಲವಾದುದರಿಂದ ಅವರ ಕಲ್ಯಾಣಕ್ಕೋಸ್ಕರ ನಾವು ರಾಜ್ಯಭಾರವನ್ನು ವಹಿಸಿದ್ದೇವೆ." ಎಂದು ಮುಸಲ್ಮಾನರು ಯಾವಾಗಲೂ ಅನ್ನುತ್ತಿದ್ದರು ಮತ್ತು "ನಾವು ಅಫಗಾನಸ್ಥಾನ, ತಾರ್ತರಿ ಮೊದಲಾದ ದೂರದೇಶಗಳಲ್ಲಿ ನಮ್ಮ ಮನೆಮಾರುಗಳನ್ನು ಬಿಟ್ಟು ಇಲ್ಲಿ ಬರುವಾಗ ಸ್ವಾರ್ಥಪರವಿಚಾರದಿಂದ ಪ್ರೇರಿತ

ರಾಗಿ ಬರಲಿಲ್ಲ; ಅದರಿಂದ ನಮಗೆ ವಿಶಿಷ್ಟಲಾಭವೇನೂ ಇದ್ದಿಲ್ಲ; ಆದರೆ ಹಿಂದೂ ಜನರಿಗೆ ಕಲ್ಯಾಣವಾಗಬೇಕೆಂಬ ಉದ್ದೇಶದಿಂದ ಇಲ್ಲಿಗೆ ಬಂದು ರಾಜ್ಯದ ಕಾರ್ಯ ಭಾರದಂತಹ ಕಠಿಣವಾದ ಹೊರೆಯನ್ನು ವೈಯ ಮೇಲೆ ತೆಗೆದುಕೊಂಡಿದ್ದೇವೆ. ಹಿಂದೂ ಜನರಲ್ಲಿ ಸುಧಾರಣೆಯುಂಟಾಗಬೇಕೆಂದೇ ನಾವು ಈ ರಾಜ್ಯಭಾರದ ನೊಗವನ್ನು ಹೆಗಲ ಮೇಲೆ ಹೊತ್ತಿದ್ದೇವೆ; ಹಿಂದೂಜನರು ಯೋಗ್ಯರಾಗಿದ್ದರೆ ನಾವು ಒಳ್ಳೆಯ ಆನಂದದಿಂದ ರಾಜ್ಯವನ್ನವರಿಗೆ ಒಪ್ಪಿಸಿಬಿಡುತ್ತಿದ್ದೆವು. ರಾಜಾ ತೋಡರಮಲ್ಲ, ಮಾನಸಿಂಹ ಮೊದಲಾದವರು ಯೋಗ್ಯರೆಂದು ಕಂಡುಬಂದುದ ರಿಂದ ಅಕಬರಬಾದಶಹನು ಅವರಿಗೆ ಎಷ್ಟೋ ಸ್ವಾತಂತ್ರ್ಯವನ್ನು ಕೊಟ್ಟುಬಿಡಲಿ ಲ್ಲವೇ ? ನಾವು ಈ ದೇಶದ ರಾಜ್ಯಕಾರ್ಯಭಾರವನ್ನು ಬಿಟ್ಟುಬಿಟ್ಟರೆ ದೇಶದಲ್ಲೆಲ್ಲ ಅವ್ಯವಸ್ಥೆಯುಂಟಾಗುವದು. ಆದುದರಿಂದ ಕೇವಲ ಹಿಂದೂಜನರ ಕಲ್ಯಾಣಕ್ಕಾ ಗಿಯೇ ನಾವು ಈ ಕಷ್ಟಕರವಾದ ಭಾರವನ್ನು ಕೈಕೊಂಡಿದ್ದೇವೆ" ಈ ಪ್ರಕಾರ ವಾಗಿಯೂ ಮುಸಲ್ಮಾನರು ಆಗಾಗ ನುಡಿಯುತ್ತಿದ್ದರು.

ಈ ಶಬ್ದಗಳಿಂದಲೇ ಶಿವಾಜಿಯು ಮುಸಲ್ಮಾನರಿಗೆ ಉತ್ತರಕೊಡುತ್ತಿದ್ದನು. "ನಾನು ಈ ಪ್ರಾಂತದ ವ್ಯವಸ್ಥೆಯನ್ನು ನನ್ನ ಕಡೆಗೆ ತೆಗೆದುಕೊಂಡಿಲ್ಲ. ಆದರೆ ದೇಶದಲ್ಲಿ ಹೊಡೆದಾಟಗಳಿದ್ದು ಅವ್ಯವಸ್ಥೆಯುಂಟಾದೀತು; ವಿಜಾಪುರದ ಬಾದ ಶಹನಿಗೆ ಇಷ್ಟು ವಿಸ್ತಾರವಾದ ರಾಜ್ಯದಲ್ಲಿ ವ್ಯವಸ್ಥೆಯನ್ನು ಕಾಯ್ದುಕೊಳ್ಳುವ ದಕ್ಕಾಗಲಿಕ್ಕಿಲ್ಲ; ಆದುದರಿಂದ ಅಲ್ಲಿಯ ಜನರು ಸ್ವತಂತ್ರರಾಗಬಹುದು. ವಿಜಾ ಪುರದ ಬಾದಶಹರ ಅಧಿಕಾರವು ಅಬಾಧಿತವಾಗಿ ನಡೆಯಬೇಕೆಂಬುದೇ ನನ್ನ ಇಚ್ಛೆಯು. ಆದುದರಿಂದಲೇ ನಾನು ವಿಜಾಪುರದಿಂದ ದೂರದಲ್ಲಿರುವ ಪ್ರಾಂತ ಗಳನ್ನು ವಶಮಾಡಿಕೊಂಡಿದ್ದೇನೆ. ಅವು ವಿಜಾಪುರದ ಬಾದಶಹನ ಪ್ರಾಂತ ಗಳೇ; ನಾನು ಅವುಗಳನ್ನು ಜಯಿಸಲಿಲ್ಲ; ವಶಮಾಡಿಕೊಂಡಿದ್ದೇನೆ. ನಾನು ಅವುಗಳನ್ನು ಕೈಸೇರಿಸಿಕೊಳ್ಳದಿದ್ದರೆ ಚಿಕ್ಕ ಚಿಕ್ಕ ಅಧಿಕಾರಿಗಳ ದುರಾಗ್ರಹದ ಮೂಲಕ ಅಲ್ಲಿಯ ಜನರಿಗೆ ತೊಂದರೆಯುಂಟಾಗುತ್ತಿತ್ತು. ಅದರಿಂದ ಸಂತಪ್ತ ರಾದ ಆ ಜನರು ಬಂಡುಮಾಡುತ್ತಿದ್ದರು. ಈ ಪ್ರಕಾರವಾಗಿ ಜನರು ಸ್ವತಂತ್ರರಾಗಿ ಹೋಗುತ್ತಿದ್ದರು; ಬಾದಶಹನು ಒಂದು ವೇಳೆ ಆ ಬಂಡಾಯವನ್ನು ಮುರಿದರೂ ಜನರು ಹೊಂಚುಹಾಕಿ ಮತ್ತೆ ಸನ್ನದ್ಧರಾಗುವ ಸಂಭವವಿತ್ತು; ವಿಜಾಪುರದ ಸೈನ್ಯವು ಅಲ್ಲಿ ತಳವೂರಿಕೊಂಡು ಇರುವ ವರೆಗೆ ಶಾಂತಿಯು ಇದ್ದಂತೆ ಭಾಸವಾಗಿ ಆ ದಂಡು ತಿರುಗಿ ಬಂದೊಡನೆಯೇ, ತಿರುಗಿ ಅವ್ಯವಸ್ಥೆಯೇ ಉಂಟಾಗುವ ಸಂಭವ

ವಿತ್ತು. ವಿಜಾಪುರದ ಬಾದಶಹನ ಮೇಲೆ ನನ್ನ ಭಕ್ತಿಯುಂಟು. ಆದುದರಿಂದಲೇ ಆತನಿಗೆ ಒದಗಬಹುದಾದ ಈ ಆಪತ್ತಿಯನ್ನು ತಪ್ಪಿಸುವದಕ್ಕೋಸ್ಕರ ಕೇವಲ ಅವನ ಹಿತವನ್ನು ಬಯಿಸಿ ಈ ಪ್ರಾಂತಗಳನ್ನು ನನ್ನ ಅಧೀನದಲ್ಲಿ ತೆಗೆದುಕೊಂಡಿದ್ದೇನೆ." ಈ ಪ್ರಕಾರ ಶಿವಾಜಿಯು ಖಂಡಿತವಾಗಿ ಹೇಳುತ್ತಿದ್ದನು.

ಶಿವಾಜಿಯು ಹೇಳುತ್ತಿರುವ ಇಂತಹ ಮಾತುಗಳಿಂದ ಬಾದಶಹನಿಗೆ ಸಮಾಧಾನವಾಗಲಿಲ್ಲ. ಆದರೆ ಶಿವಾಜಿಯ ಮೇಲೆ ದಂಡೆತ್ತಿ ಹೋಗುವುದಕ್ಕೂ ಆತನು ಅಪೇಕ್ಷಿಸುತ್ತಿದ್ದಿಲ್ಲ. ಮಹಾರಾಷ್ಟ್ರದ ನಿಜವಾದ ಒಡೆಯರು ನಾವೇ ಆಗಿದ್ದೇವೆಂಬ ತಿಳಿವಳಿಕೆಯು ಮರಾಟರಲ್ಲಿ ಉತ್ಪನ್ನವಾಗಿತ್ತು. ಆದುದರಿಂದ ಒಳ್ಳೆಯ ಮಾತುಗಳಿಂದ ಒಡಂಬಡಿಕೆಯನ್ನು ಮಾಡಿಕೊಳ್ಳುವದೇ ವಿಜಾಪುರದವರಿಗೆ ಲಾಭಕರವಾಗಿತ್ತು. ಮಹಾರಾಷ್ಟ್ರತರುಣರೆಲ್ಲರೂ ಶಿವಾಜಿಯ ಮಾತಿನಂತೆ ನಡೆಯುತ್ತಿದ್ದರು. ಆದುದರಿಂದ ಆತನ ವಿರುದ್ಧವಾಗಿ ನಿಲ್ಲುವದು ವಿಜಾಪುರದ ಬಾದಶಹನಿಗೆ ಶ್ರೇಯಸ್ಕರವಾಗಿದ್ದಿಲ್ಲ. ಮೇಲಾಗಿ ಶಿವಾಜಿಯ ತಂದೆಯಾದ ಶಹಾಜಿಭೋಸಲೆಯು ಅದಿಲಶಾಹಿ, ನಿಜಾಮುಶಾಹಿ ಮತ್ತು ಮೊಗಲಶಾಹಿ ಈ ಮೂರು ರಾಜ್ಯಗಳಲ್ಲಿಯೂ ತನ್ನ ವರ್ಚಸ್ಸನ್ನು ಕಾದುಕೊಂಡಿದ್ದನು. ಆತನ ಮನಸ್ಸಿನ ವಿರುದ್ಧವಾಗಿ ಯಾವ ರಾಜನೂ ನಡೆಯುತ್ತಿದ್ದಿಲ್ಲ. ಶಹಾಜೀರಾಜನ ಬೆಂಬಲವು ನಮಗಿದ್ದರೆ ನಾವು ಯಾವುದಕ್ಕೂ ಭಯಪಡಬೇಕಾಗಿಲ್ಲವೆಂದು ಎಲ್ಲರೂ ತಿಳಿಯುತ್ತಿದ್ದರು. ಕರ್ನಾಟಕಪ್ರಾಂತದಲ್ಲಂತೂ ಶಹಾಜಿಯು ಅದ್ವಿತೀಯನಾಗಿದ್ದನು. ಅಲ್ಲಿ ಆತನು ಹೇಳಿದುದೇ ಪೂರ್ವದಿಕ್ಕು! ಶಹಾಜಿಯ ಉಸಿರಿನಂತೆಯೇ ಆಗಿನಕಾಲದ ಕನ್ನಡದೇಶವು ನಡೆಯುತ್ತಿತ್ತು! ಆದುದರಿಂದ ಶಿವಾಜಿಯ ಮೇಲೆ ಪ್ರತ್ಯಕ್ಷವಾಗಿ ದಂಡೆತ್ತಿಹೋಗಿ ಶಹಾಜಿಯ ವೈರವನ್ನು ಕಟ್ಟಿಕೊಳ್ಳುವದು ವಿಜಾಪುರದವರ ಮನಸ್ಸಿನಲ್ಲಿದ್ದಿಲ್ಲ. ಶಹಾಜಿಯು ಇಷ್ಟೊಂದು ಪರಾಕ್ರಮಶಾಲಿಯಾಗಿದ್ದರೂ, ವಿಜಾಪುರದ ಬಾದಶಹನಿಗೆ ವಿಧೇಯನಾಗಿ ನಡೆದುಕೊಳ್ಳುತ್ತಿದ್ದನು. ಮಹಾರಾಷ್ಟ್ರವು ಸ್ವತಂತ್ರವಾಗಬಹುದೆಂದು ಆತನಿಗೆ ತಿಳಿದಿದ್ದಿಲ್ಲ. ಮಹಾರಾಷ್ಟ್ರವು ಸ್ವಾತಂತ್ರ್ಯವನ್ನು ಅನುಭವಿಸುವ ಸುಸ್ಥಿತಿಗೆ ಬಂದಿದೆಯೆಂದು ಆತನಿಗೆ ಎನಿಸುತ್ತಿದ್ದಿಲ್ಲ. ಆದುದರಿಂದಲೇ ಆತನು ಕರ್ನಾಟಕದ ಕಾರ್ಯಭಾರವನ್ನು ಸ್ವತಂತ್ರವಾಗಿಯೇ—ಆದರೂ ವಿಜಾಪುರದ ಬಾದಶಹರ ಹೆಸರಿನಿಂದ—ಮಾಡುತ್ತಿದ್ದನು. ಆದುದರಿಂದ ವಿಜಾಪುರದ ಬಾದಶಹನು ಶಹಾಜಿಯಿಂದ ಶಿವಾಜಿಗೆ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳಿಸಬೇಕೆಂದು ಆಲೋಚಿಸಿದನು. ಶಹಾ

ಜಿಯು ‘ ವಿಜಾಪುರದ ವಿರುದ್ಧವಾಗಿ ಬಂಡಾಯವನ್ನೆಬ್ಬಿಸಲಾಗದೆಂ’ದು ಮಗನಿಗೆ ಉಪದೇಶಮಾಡಿದನು. ಆದರೆ ಶಿವಾಜಿಯು ತಂದೆಗೆ ದಿಟ್ಟತನದಿಂದ ಹೀಗೆ ಉತ್ತರವನ್ನು ಕಳಿಸಿದನು :— “ ಹಿಂದುಸ್ಥಾನದಲ್ಲಿ ಸ್ವರಾಜ್ಯವನ್ನು ಸ್ಥಾಪಿಸಲು ನಾನು ಬದ್ಧಕಂಕಣನಾಗಿದ್ದೇನೆ. ಮುಸಲ್ಮಾನರು ಗೋಬ್ರಾಹ್ಮಣರ ಮೇಲೆ ನಡಿಸುತ್ತಿರುವ ಅತ್ಯಾಚಾರಗಳನ್ನು ನಾನು ಸಹಿಸಲಾರೆನು. ಮುಸಲ್ಮಾನರ ಸೇವಕನೆಂದು ಕರೆಯಿಸಿಕೊಳ್ಳಲಿಕ್ಕೆ ನನ್ನ ಮನಸ್ಸು ಒಪ್ಪುವುದಿಲ್ಲ. ” ಈ ಪ್ರಕಾರದ ಉತ್ತರವು ದೊರೆತರೂ, ತನ್ನ ಮಗನ ಮನಸ್ಸನ್ನು ತಿರುಗಿಸಲು ಶಹಾಜಿಯು ಅನೇಕವಿಧವಾಗಿ ಪ್ರಯತ್ನಮಾಡಿದನು. ಮಹಾರಾಷ್ಟ್ರವು ಸ್ವತಂತ್ರವಾಗುವ ವೇಳೆಯು ಇನ್ನೂ ಪ್ರಾಪ್ತವಾಗಿಲ್ಲವೆಂದು ಆತನು ಶಿವಾಜಿಗೆ ಹೇಳಿದನು. ಆದರೆ “ ಕಾಲವು ತಾನಾಗಿಯೇ ಪ್ರಾಪ್ತವಾಗದೆ ಇದ್ದರೂ ಅಂತಹ ಕಾಲವು ಪ್ರಾಪ್ತವಾಗುವಂತೆ ನಾನು ಮಾಡುತ್ತೇನೆ; ಹಿಂದುಸ್ಥಾನಕ್ಕೆ ಸ್ವರಾಜ್ಯವು ಲಭಿಸಿದ ಹೊರತು ನನ್ನ ಈ ಕೆಲಸವನ್ನು ನಾನು ಬಿಡುವದಿಲ್ಲ. ” ಎಂಬುದಾಗಿ ಶಿವಾಜಿಯು ಸ್ಪಷ್ಟವಾದ ಉತ್ತರವನ್ನು ತಂದೆಗೆ ಕೊಟ್ಟನು. ಕೊನೆಗೆ ಶಹಾಜಿಯು ನಿರುಪಾಯನಾಗಿ ಶಿವಾಜಿಯು ತನ್ನ ವಶದಲ್ಲಿಲ್ಲವೆಂದೂ, ಆತನು ಈಗ ದೊಡ್ಡವನಾಗಿರುವದರಿಂದ ಸ್ವತಂತ್ರನಿದ್ದಾನೆಂದೂ, ಆತನು ತನ್ನ ಆಜ್ಞಾನುಸಾರವಾಗಿ ವರ್ತಿಸುವದಿಲ್ಲವಾದುದರಿಂದ ಆತನು ಮಾಡಿದ ಯಾವ ಕೆಲಸಗಳಿಗೂ ತಾನು ಹೊಣೆಗಾರನಲ್ಲವೆಂದೂ ವಿಜಾಪುರದ ಬಾದಶಹನಿಗೆ ತಿಳಿಸಿಬಿಟ್ಟನು.

ಈ ಉತ್ತರವನ್ನವಲೋಕಿಸಿ ಬಾದಶಹನ ಅಂಗಾಲೊಳಗಿನ ಬೆಂಕಿಯು ನೆತ್ತಿಗೆ ಏರಿತು. ಶಿವಾಜಿಯ ಪುಂಡತನವನ್ನು ಮುರಿಯುವ ವಿಚಾರವನ್ನು ಕುರಿತು ರಾಜ್ಯದಲ್ಲೆಲ್ಲ ಚರ್ಚೆಗೆ ಆರಂಭವಾಯಿತು; ಶಿವಾಜಿಯನ್ನು ಹಿಡಿದು ತಂದು ವಿಜಾಪುರದಲ್ಲಿ ಆತನಿಗೆ ದೇಹಾಂತಶಿಕ್ಷೆಯನ್ನು ವಿಧಿಸಬೇಕೆಂದು ಪ್ರತಿಯೊಬ್ಬ ಖಾನನೂ ಅಭಿಪ್ರಾಯಪಟ್ಟನು. ವಿಜಾಪುರದ ಅಗಸೆಯ ಮೇಲೆ ವಿಜಯನಗರದ ರಾಮರಾಜನ ತಲೆಯ ಸ್ಥಳದಲ್ಲಿ ಶಿವಾಜಿಯ ತಲೆಯು ಚೆನ್ನಾಗಿ ಶೋಭಿಸುವದೆಂದು ಪ್ರತಿಯೊಬ್ಬ ಸರದಾರನಿಗೂ ತೋರುತ್ತಿತ್ತು!

ಬಾದಶಹನು ಮುದುಕನಾಗಿದ್ದರೂ ಆತನಿಗೆ ಈ ಸಮಯಲ್ಲಿ ಸ್ಫೂರ್ತಿಯುಂಟಾಯಿತು; ಶಿವಾಜಿಯು ಹಾವಿನ ಮರಿಯಂತೆ ನಂಬಿಗೆಗೆ ಅರ್ಹನಲ್ಲವೆಂದು ಆತನಿಗೆ ಮನವರಿಕೆಯಾಯಿತು. ಈಗ ಆತನನ್ನು ಉಪೇಕ್ಷಿಸಿದರೆ ಮುಂದೆ ಒಂದಿಲ್ಲೊಂದು ದಿನ ಆತನು ವಿಜಾಪುರದ ಗಾದಿಯ ಮೇಲೆ ಕಯ್ಯಾಡದೆ ಇರನೆಂದು

ಆತನು ತಿಳಿದನು. ಶಿವಾಜಿಗೆ ಯಾವ ತರದ ದಂಡನೆಯನ್ನು ವಿಧಿಸಬೇಕೆಂಬ ದನ್ನು ನಿಶ್ಚಯಿಸುವದಕ್ಕಾಗಿ ಆತನು ದರಬಾರವನ್ನು ನೆರೆಯಿಸಿದನು.

ಆ ಕಾಲಕ್ಕೆ ವಿಜಾಪುರದ ಐಶ್ವರ್ಯವು ಉನ್ನತಶಿಖರಕ್ಕೆ ಮುಟ್ಟಿತ್ತು. ಶಹಾಜಿ ಭೋಸಲೆ, ಅಫ್‌ಜಲ್‌ಖಾನ, ಬಜಾಜೀಖಾನ ಮೊದಲಾದ ಶೂರಸರದಾರರು ವಿಜಾಪುರದ ಗಾದಿಯ ಸೇವೆಯಲ್ಲಿ ನಿರತರಾಗಿದ್ದರು. ರತ್ನಖಚಿತವಾದ ಸಿಂಹಾಸನದಲ್ಲಿ ಬಾದಶಹನು ವಿಶ್ರಮಿಸಿದ ಬಳಿಕ ವಾಡಿಕೆಯಂತೆ ವಂದಿಗಳು ಸ್ತೋತ್ರಪಾಠಗಳನ್ನು ಅಂದರು. ದರಬಾರಿನ ಜನರ ಸಲಾಮುಗಳು ಮುಗಿದವು. ಆ ಮೇಲೆ ವಜೀರನು ಶಹಾಜೀರಾಜನ ಪತ್ರವನ್ನು ಓದಿ ತೋರಿಸಿದನು. ಅದನ್ನು ಕೇಳಿದೊಡನೆಯೇ ಸಭೆಯೊಳಗೆ ಎಲ್ಲೆಡೆಯಲ್ಲಿಯೂ ಗದ್ದಲವು ಆರಂಭವಾಯಿತು. ಮುಸಲ್ಮಾನರೆಲ್ಲರೂ "ಯಾ ಅಲ್ಲಾ! ಕ್ಯಾ ಬದಮಾಶ ಹೈ, ಬದಮಾಶಕು ಫಾಶೀ ದೇನಾ ಚಾಹಿಯೇ! ಬಾದಶಹಾ ಶಹಾನಶಹಾಸೇ ಇತನಾ ಮಗರೂರೀ!" ಎಂದು ಒದರಾಡ ಹತ್ತಿದರು! ಮದಾಂಧರಾದ ಕೆಲವು ಖಾನರು ಮರಾಟರೆಲ್ಲರೂ 'ಬದಮಾಶ'ರೆಂದು ನುಡಿಯಹತ್ತಿದರು. ಅದನ್ನು ಕೇಳಿ ದರಬಾರದಲ್ಲಿದ್ದ ಮಹಾರಾಷ್ಟ್ರ ಸರದಾರರಿಗೆ ಸಹನವಾಗಲಿಲ್ಲ; ಸಂತಾಪದಿಂದ ಅವರ ಕಣ್ಣುಗಳು ಕೆಂಡದಂತಾದವು. ಇದನ್ನು ಕಂಡು ವಜೀರನು ಕೂಡ ಬೆದರಿದನು. ಏಕೆಂದರೆ ವಂಶಪರಂಪರೆಯಿಂದ ಬಂದ ಮರಾಟ ಸವಾರರ ಪರಾಕ್ರಮದಿಂದಲೇ ವಿಜಾಪುರದ ಸಿಂಹಾಸನವು ಸ್ಥಿರವಾಗಿತ್ತು. ಮರಾಟ ಸರದಾರರಿಗೆ ಅಸಂತೋಷವನ್ನುಂಟು ಮಾಡಿದರೆ ಪರಿಣಾಮವು ನೆಟ್ಟಗಾಗುವದಿಲ್ಲವೆಂಬುದು ಬಾದಶಹನಿಗೂ ವಜೀರನಿಗೂ ಮನವರಿಕೆಯಾಗಿತ್ತು. ಕೃತಜ್ಞರಾದ ಈ ಮಹಾರಾಷ್ಟ್ರರು ವಿರುದ್ಧರಾದರೆ ವಿಜಾಪುರದ ಇತಿಶ್ರೀಯಾಗಲು ಬಹುಕಾಲವು ಬೇಕಾಗಿಲ್ಲವೆಂದು ತಿಳಿದವನಾದ ವಜೀರನು ಇಂತು ನುಡಿದನು– "ಖಾಮೋಷ, ನೀವು ಬದಮಾಶರೆಂದು ಯಾರಿಗೆ ಅನ್ನುತ್ತೀರಿ? ಶಹಾಜೀರಾಜನು ನಮ್ಮ ಪ್ರಾಮಾಣಿಕನಾದ ಸರದಾರನು. ಆತನು ಕರ್ಣಾಟಕ ಪ್ರಾಂತದಲ್ಲಿ ಮಾಡಿದ ಕೆಲಸವನ್ನು ನಾವು ಎಂದೂ ಮರೆಯುವಂತಿಲ್ಲ. ಮರಾಟರಂತಹ ಶೂರರೂ ಕೃತಜ್ಞರೂ ಆದ ಸರದಾರರು ಇರುವರೆಂತಲೇ ಶಹಾನಶಹಾನಿಗೆ ರಾತ್ರಿಯಲ್ಲಿ ಚೆನ್ನಾಗಿ ನಿದ್ದೆಹತ್ತುತ್ತದೆ. ಆದರೆ ಶಹಾಜಿಯ ಮಗನು ಉದ್ಧಟನಾಗಿರುವದೇನೋ ನಿಜ! ಅವನಿಗೆ ಮಾತ್ರ ನೀವು ಬದಮಾಷ ಎನ್ನುತ್ತಿದ್ದರೆ, ಆ ಮಾತು ಬೇರೆ!"

ಎಲ್ಲ ಮರಾಟ ಸರದಾರರೂ ದೊಡ್ಡ ದನಿಯಿಂದ ಉತ್ತರವಿತ್ತರು. "ಹೌದು

ಅವನೇ ಬದಮಾಷನಾಗಿದ್ದಾನೆ! ಆತನನ್ನು ಹಿಡಿದು ಆನೆಯ ಕಾಲಿಗೆ ಕಟ್ಟಿ ಕೊಲ್ಲಿಸತಕ್ಕದ್ದು!"

ಬಜಾಜೀಖಾನನು ಎದ್ದು ನಿಂತು ನಡುವೆ ಮಾತಾಡಿದನು— "ಶಿವಾಜಿಯು ಶಹಾಜಿಯ ಮಗನೆಂಬುದನ್ನು ಮರೆಯತಕ್ಕದ್ದಲ್ಲ. ಶಿವಾಜಿಯನ್ನು ಮನಬಂದಂತೆ ಶಿಕ್ಷಿಸಿದರೆ ಶಹಾಜಿಯು ನಮ್ಮ ಪಕ್ಷವನ್ನು ಬಿಟ್ಟು ಮೊಗಲರನ್ನು ಕೂಡುವ ಸಂಭವ ವುಂಟಾದೀತು! ಮೊಗಲರಿಗಾದರೋ ಇದು ಅತ್ಯಂತ ಇಷ್ಟವಾಗಿದೆ! ಅವರು ವಿಜಾಪುರದ ಮೇಲೆ ಎಷ್ಟು ದಿವಸಗಳಿಂದ ಕಣ್ಣು ಇಟ್ಟಿರುವರೆಂಬುದು ಎಲ್ಲರಿಗೂ ತಿಳಿದೇ ಇದೆ; ಇಂತಹ ಸ್ಥಿತಿಯಲ್ಲಿ ಶಹಾಜಿಗೆ ಅಸಂತೋಷವನ್ನು ಹುಟ್ಟಿಸುವುದು ಸರಿಯಲ್ಲ."

ದರಬಾರದೊಳಗಿದ್ದ ಮರಾಟರೆಲ್ಲರೂ ಬಜಾಜಿಯ ಮಾತಿಗೆ ಒಡಂಬಟ್ಟರು. ಆದರೆ ಮುಸಲ್ಮಾನಸರದಾರರಿಗೆ ಇದು ರುಚಿಸಲಿಲ್ಲ. ಅಫ್‌ಜಲ್‌ಖಾನನು ಸಿಟ್ಟಿನಿಂದ ಎದ್ದು ನಿಂತು ಉಚ್ಚಸ್ವರದಿಂದ ಮಾತನಾಡಿದನು. "ಶಹಾಜಿಯು ಒಬ್ಬನೇ ಏಕೆ? ಅಂತಹ ನೂರಾರು ಶಹಾಜಿಗಳು ಬಂದರೂ ಬರಲಿ! ಶಹಾಜಿಯು ಶೂರನಾಗಿದ್ದರೆ ನಾವೇನು ಕಯ್ಯಲ್ಲಿ ಬಳೆಯನ್ನು ಇಟ್ಟಿರುವೆವೇ? ಆ ಹುಡುಗ ಮುಂಡೇ ಮಗ ಶಿವಾಜಿಯು, ತಂದೆಯ ಮನಸ್ಸಿನ ವಿರುದ್ಧವಾಗಿ ಬಂಡುಮಾಡುವದು ಸಂಭವನೀಯವೇ? ಎಂದಿಗೂ ಅಲ್ಲ; ಶಹಾಜಿಯು ನಿಶ್ಚಯವಾಗಿಯೂ ಬದಮಾಷನಾಗಿದ್ದಾನೆ; ಆತನು ಒಳಗಿಂದೊಳಗೇ ಶಿವಾಜಿಗೆ ಅನುಕೂಲನಾಗಿರಲೇ ಬೇಕು! ಆತನು ಮೇಲಿನಿಂದ ನೋಡಲಿಕ್ಕೆ ರಾಜನಿಷ್ಠನಂತೆ ತೋರುತ್ತಾನೆ. ಆದರೆ ಆತನು ಮನಃಪೂರ್ವಕವಾಗಿ ಬಂಡುಗಾರರಿಗೆ ಅನುಕೂಲನಾಗಿಯೇ ಇದ್ದಾನೆ. ಅವರಿಬ್ಬರನ್ನೂ ಹಿಡಿದು ತಂದು ಆನೆಯ ಕಾಲಿಗೆ ಕಟ್ಟಿ ತುಳಿಸಲಿಕ್ಕೇ ಬೇಕು. ಮರಾಟರೆಲ್ಲರೂ ಕೃತಘ್ನರೇ!!"

ದರಬಾರದೊಳಗಿನ ಮರಾಟರೆಲ್ಲರೂ ಕತ್ತಿಯನ್ನು ಒರೆಯೊಳಗಿಂದ ಹಿರಿದರು. ಅವರನ್ನು ನೋಡಿ ಮುಸಲ್ಮಾನರೂ ಖಡ್ಗಪಾಣಿಗಳಾದರು. ಕ್ಷಣಾರ್ಧದಲ್ಲಿ ಪರಸ್ಪರರನ್ನು ತುಂಡರಿಸಿ ಚೆಲ್ಲುವರೆಂಬ ಭಯವು ಎಲ್ಲರಲ್ಲಿಯೂ ಉತ್ಪನ್ನವಾಯಿತು. ಆದರೆ ವಜೀರನೂ, ಬಜಾಜೀಖಾನನೂ, ಬಾದಶಹನೂ ಮಧ್ಯಸ್ಥಿಕೆಯನ್ನು ವಹಿಸಿದುದರಿಂದಲೇ ಅಂತಹ ಅನಾಹುತವು ಒದಗಲಿಲ್ಲ!

ಸರ್ವತ್ರವೂ ಶಾಂತತೆಯುಂಟಾದ ಬಳಿಕ ಬಜಾಜೀಖಾನನು ಮಾತನಾಡಿದನು. "ಅಫ್‌ಜಲ್‌ಖಾನರೇ, ನೀವು ಮಾತನಾಡುವ ಮೊದಲು ಪೂರ್ಣವಾಗಿ

ವಿಚಾರಮಾಡತಕ್ಕದ್ದಿತ್ತು. ನಿಮ್ಮ ಮಾತಿನಿಂದ ಮರಾಟ ಸರದಾರರ ಮನಸ್ಸಿಗೆ ಎಷ್ಟೊಂದು ವ್ಯಸನವಾಗಬಹುದೆಂಬುದನ್ನು ನೀವು ಲೆಕ್ಕಿಸಲಿಲ್ಲ. ಮರಾಟರು ಬಹಳ ಪರಾಕ್ರಮಿಗಳು; ವಿಜಾಪುರದ ಸಿಂಹಾಸನವು ಅವರನ್ನೇ ಅವಲಂಬಿಸಿರುತ್ತದೆ. ನೀವು ಕ್ಷಣಕ್ಷಣಕ್ಕೆ ಈ ಪ್ರಕಾರವಾಗಿ ಅವರ ಮನಸ್ಸನ್ನು ನೋಯಿಸಿದರೆ ವಿಜಾಪುರದ ಸಿಂಹಾಸನದ ವಿಷಯಕ್ಕೆ ಮಮತ್ವವು ಅವರಲ್ಲಿ ಹೇಗೆ ಉತ್ಪನ್ನವಾಗಬೇಕು ? "

ಅಫ್‌ಜಲ್‌ಖಾನನು ಕೋಪಾತಿರೇಕದಿಂದ ಹಲ್ಲುದವಡೆಯನ್ನು ಕಚ್ಚಿ ಮಾತನಾಡಿದನು. "ಬಜಾಜೀಖಾನರಿಗೆ ಮುಸಲ್ಮಾನ ಸರದಾರರ ಲಕ್ಷ್ಯವೇ ಇಲ್ಲ. ಮರಾಟರ ಸೂಕ್ಷ್ಮವಾದ ಮನಸ್ಸನ್ನು ನೋಯಿಸಬಾರದೆಂಬ ವಿಷಯದಲ್ಲಿ ಮಾತ್ರ ಅವರು ಜಾಗರೂಕರಾಗಿದ್ದಾರೆ. ಮರಾಟರು ಬಂಡುಗಾರರೆಂದು ಹೇಳಿದರೆ ಅದು ಅವರ ಮನಸ್ಸಿಗೆ ಬರುವುದಿಲ್ಲ. ಮುಸಲ್ಮಾನರು ಮರಾಟರಿಗಿಂತ ಶೂರರೆಂಬ ಮಾತು ಅವರಿಗೆ ರುಚಿಸುವುದಿಲ್ಲ. ಆದುದರಿಂದ ಇವರು ತೋರಿಕೆಗೆ ಮಾತ್ರ ಬಜಾಜೀಖಾನರಾಗಿದ್ದರೂ, ನಿಜವಾಗಿ ಬಜಾಜೀ ನಿಂಬಾಳಕರರೇ ಇರುತ್ತಾರೋ ಏನೋ ಎಂಬ ಸಂದೇಹವು ಉತ್ಪನ್ನವಾಗುತ್ತದೆ. ಬಾದಶಹನು ಒಬ್ಬ ಮರಾಟನನ್ನೇ ಅಳಿಯನನ್ನಾಗಿ ಮಾಡಿಕೊಂಡರೋ ಏನೋ ಎನಿಸುತ್ತದೆ!" ಇದನ್ನು ಕೇಳಿ ಬಾದಶಹನು ಅಫ್‌ಜಲ್‌ಖಾನನಿಗೆ ಮಾತನಾಡದಿರಲು ಸನ್ನೆಮಾಡಿದನು. ಆಗ ಬಜಾಜೀಖಾನನು ಮತ್ತೆ ಎದ್ದು ಮಾತಾಡ ಹತ್ತಿದನು. "ಸರಕಾರ, ಆ ಮೂರ್ಖನ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳುವಷ್ಟು ನಾನು ಮೂರ್ಖನಲ್ಲ! ನನಗೆ ಯೋಗ್ಯವೆಂದು ತೋರಿದ ಅಭಿಪ್ರಾಯವನ್ನು ನಾನು ನಿವೇದಿಸಿದ್ದೇನೆ."

ಅಫಜಲ್‌ಖಾನನು ನಡುವೇ ಮಾತನಾಡಿದನು. "ಅಬ್ಬಬ್ಬಾ ! ಶಿವಾಜಿ ಭೋಸಲೆಯು ದಂಗೆಯನ್ನೆಬ್ಬಿಸಿರುವದರಿಂದ ಆತನಿಗೆ ಮಂತ್ರಿಪದವನ್ನು ಕೊಡಬೇಕೆಂಬುದು ತಮ್ಮ ಅಭಿಪ್ರಾಯವಾಗಿರಬಹುದು ! ಬಾದಶಹನ ವಿರುದ್ಧವಾಗಿ ಆತನು ಬಂಡುಮಾಡಿದರೇನಾಯಿತು? ಜಾತಿಯಿಂದ ಮರಾಟನೇ ಆಗಿರುವನಲ್ಲವೆ ! ಅದರಲ್ಲಿಯೂ ನಿಂಬಾಳಕರರ ಆಪ್ತನು! ಅಂದಮೇಲೆ ಅಂತಹನು ಬಾದಶಹನ ವಿರುದ್ಧವಾಗಿ ಬಂಡಾಯವನ್ನೆಬ್ಬಿಸಿದರೇನಾಯಿತು ? ಅವನಿಗೆ ಮರಣಶಿಕ್ಷೆಯನ್ನು ವಿಧಿಸಬಹುದೆ ? ಶಿವಾಜಿಯ ಕೂದಲನ್ನು ಕೂಡ ಕದಲಿಸದೆ ಹಾಗೆಯೇ ಬಿಟ್ಟು ಬಿಡಬೇಕು. ಆತನು ಒಂದಿಲ್ಲೊಂದು ದಿನ ವಿಜಾ-

ಪುರವನ್ನು ಸ್ವಾಧೀನಪಡಿಸಿಕೊಂಡರೂ ಅಡ್ಡಿಯಿಲ್ಲ! ಬಜಾಜೀಖಾನರೇ, ಇದೇ ನಿಮ್ಮ ಪ್ರಾಮಾಣಿಕವಾದ ಅಭಿಪ್ರಾಯವಲ್ಲವೇ!"

ಬಜಾಜೀಖಾನನು ಎದ್ದು ನಿಂತು ಬಾದಶಹನಿಗೆ ಸಲಾಮು ಮಾಡಿದನು. ಆಮೇಲೆ ಶಾಂತಸ್ವರದಿಂದ ಮಾತನಾಡಹತ್ತಿದನು. "ನಾನು ಹುಟ್ಟಾ ಮರಾಟನೆಂಬುದಾಗಿ ನನ್ನ ಮೇಲೆ ಅಫ್‌ಜಲ್‌ಖಾನರ ವಕ್ರದೃಷ್ಟಿಯುಂಟು. ನನ್ನ ರಾಜನಿಷ್ಠೆಯು ದಾಂಭಿಕವಾದದೆಯೆಂದು ಅವರು ತಿಳಿದಿದ್ದಾರೆ. ಆದರೆ ನಿಜವಾದ ಮರಾಟನು ಎಂದೂ ಕೃತಘ್ನನಾಗಲಾರನೆಂಬ ಮಾತನ್ನು ಅವರು ಮರೆಯುತ್ತಾರೆ. ನಾನಂತೂ ಮುಸಲ್ಮಾನನಾಗಿದ್ದೇನೆ. ಬಾದಶಹನು ಪ್ರೀತಿಯಿಂದ ನನಗೆ ಇಷ್ಟೊಂದು ಉಚ್ಚಪದವನ್ನು ದಯಪಾಲಿಸಿದ್ದಾನೆ. ಅಂದಮೇಲೆ ನಾನು ಕೃತಘ್ನನಾಗುವದೆಂತು? ನನ್ನ ಮಾವನ ಸಿಂಹಾಸನದ ಭದ್ರತೆಯನ್ನು ಕುರಿತು ನನಗೆ ಚಿಂತೆಯಿಲ್ಲವೇ? ಶಿವಾಜಿಯನ್ನು ಹಿಡಿದು ವಿಜಾಪುರಕ್ಕೆ ತೆಗೆದುಕೊಂಡು ಬರಬೇಕೆಂಬ ನನ್ನ ಅಭಿಪ್ರಾಯವನ್ನು ನಾನು ಮೊದಲೇ ಬಾದಶಹನ ಅಡಿಯಲ್ಲಿ ನಿವೇದಿಸಿದ್ದೇನೆ. ಶಿವಾಜಿಯು ಈಗ ಹುಡುಗನಲ್ಲ. ಮೊದಲಿನಂತೆ ಆತನ ಕಡೆಗೆ ದುರ್ಲಕ್ಷ್ಯಮಾಡಿದರೆ ಈಗ ನಡೆಯುವಂತಿಲ್ಲ. ಯಾಕಂದರೆ ಆತನ ಉದ್ಧಟತನವು ಬೆಳೆಯುತ್ತ ಈಗ ಆತನ ಕೃತ್ಯಗಳಿಗೆ ವ್ಯವಸ್ಥಿತವಾದ ಬಂಡಾಯದ ಸ್ವರೂಪವು ಪ್ರಾಪ್ತವಾಗಿದೆ. ಇದೆಲ್ಲವನ್ನೂ ನಾನು ಬಲ್ಲೆನು; ಆದರೆ ಯಾವದೊಂದು ಕೆಲಸವನ್ನು ಪೂರ್ಣ ವಿಚಾರದಿಂದಲೇ ಮಾಡಬೇಕು. ನಾವು ಯಾರ ಅಭಿಪ್ರಾಯವನ್ನೂ ತೆಗೆದುಕೊಳ್ಳದೆ ಶಿವಾಜಿಯ ಮೇಲೆ ದಂಡೆತ್ತಿ ಹೋದರೆ, "ನನಗೆ ತಿಳಿಸದೆ ನೀವು ಹೀಗೇಕೆ ಮಾಡಿದಿರಿ? ನಾನು ನನ್ನ ಮಗನನ್ನು ಸುಲಭವಾಗಿಯೇ ಹಾದಿಗೆ ತರುತ್ತಿದ್ದೆನು." ಎಂದು ಶಹಾಜಿಯು ನಮ್ಮನ್ನು ಕೇಳಬಹುದಾಗಿತ್ತು. ಆದುದರಿಂದ ನಾವಿದನ್ನು ವಿಚಾರ ಮಾಡಿಯೇ ಶಹಾಜಿಯನ್ನು ಶಿವಾಜಿಯ ಔದ್ಧತ್ಯದ ವಿಷಯವಾಗಿ ಕೇಳಿದೆವು. ಆದರೆ ಈಗ ಶಹಾಜಿಯು ತನ್ನ ಮೈಮೇಲಿನ ಹೊಣೆಯನ್ನು ತೆಗೆದುಕೊಂಡು ಬಿಟ್ಟನಾದುದರಿಂದ ಶಿವಾಜಿಗೆ ಶಿಕ್ಷೆಯನ್ನು ವಿಧಿಸುವ ಅಧಿಕಾರವು ದರಬಾರದ ಕಯ್ಯಲ್ಲಿದೆ. ಶಿವಾಜಿಯು ಶಹಾಜಿಯ ಅಧೀನನಲ್ಲ. ಆದುದರಿಂದ ದರಬಾರವು ಆತನನ್ನು ಅಧೀನದಲ್ಲಿಟ್ಟುಕೊಳ್ಳಲಿಕ್ಕೇ ಬೇಕು; ಮತ್ತು ಆದಷ್ಟು ಬೇಗನೇ ಶಿವಾಜಿಯ ಪುಂಡಾಟವನ್ನು ಅಡಗಿಸಿ ಆತನಿಗೆ ಯೋಗ್ಯಶಿಕ್ಷೆಯನ್ನು ವಿಧಿಸಬೇಕೆಂದು ನಾನು ವಿನಂತಿಮಾಡಿಕೊಳ್ಳುತ್ತೇನೆ. ಆತನ ಪುಂಡತನವನ್ನು ನಿಲ್ಲಿಸುವದಕ್ಕೆ ಒಬ್ಬ ಶೂರಸರದಾರ

ನನ್ನು ನಿಯಮಿಸಬೇಕು. ಶಿವಾಜಿಯಂತಹ ಶೂರಸರದಾರನ ಬೆಂಬಲವು ಅದಿಲ್ ಶಾಹಿಗೆ ದೊರೆತದ್ದಾದರೆ ಮೊಗಲರೊಡನೆ ಕಾದುವದಕ್ಕೆ ಎಷ್ಟೋ ಸುಲಭವಾಗುವದು. ಆದುದರಿಂದ ಆತನನ್ನು ವಿಜಾಪುರದ ಸಿಂಹಾಸನಕ್ಕೆ ಅಧೀನನನ್ನಾಗಿ ಮಾಡಿಕೊಳ್ಳುವುದು ಹಿತಕರವಾದುದು. ಅಂತೇ ಆತನಿಗೆ ಶಿಕ್ಷೆಯನ್ನು ವಿಧಿಸುವಾಗ ಪೂರ್ಣವಾಗಿ ವಿಚಾರ ಮಾಡತಕ್ಕದ್ದು." ಇಷ್ಟು ಮಾತನಾಡಿ ಬಜಾಜಿಯು ಕುಳಿತನು; ಆತನ ಅಭಿಪ್ರಾಯವು ಮರಾಟಸರದಾರರಿಗಷ್ಟೇ ಅಲ್ಲದೆ ಅಫ್‌ಜಲ್‌ಖಾನನಂತಹ ದುರಾಗ್ರಹಿಗಳನ್ನುಳಿದು ಇತರ ಮುಸಲ್ಮಾನರಿಗೂ ಸಮಂಜಸವೆನಿಸಿತು. ಸರಳ ಮನಸ್ಸಿನ ಮುಸಲ್ಮಾನರು ಬಜಾಜಿಯ ಮಾತಿಗೆ ತಲೆದೂಗಿದರು. ಆಮೇಲೆ ಬಾದಶಹನು ಈ ಪ್ರಕಾರ ಮಾತಾಡಿದನು. "ಬಜಾಜೀಖಾನರೇ, ನಿಮ್ಮ ಅಭಿಪ್ರಾಯವು ನಮಗೆ ಮಾನ್ಯವಿದೆ. ಶಿವಾಜಿಯು ನಮ್ಮ ಕೈಯಲ್ಲಿ ಸಿಕ್ಕಬಳಿಕ ಆತನನ್ನು ಹೇಗೆ ನಡಿಸಿಕೊಳ್ಳಬೇಕೆಂಬುದು ಮುಂದಿನ ಮಾತು! ಅದನ್ನು ಚೆನ್ನಾಗಿ ವಿಚಾರ ಮಾಡಿ ಆಮೇಲೆ ನಿಶ್ಚಯಿಸಲಿಕ್ಕೆ ಬಂದೀತು! ಆತನು ವಿಜಾಪುರದ ಆಜ್ಞಾಧಾರಕಸೇವಕನಾದರೆ ಒಳಿತೇ ಆಯಿತು. ಆದರೆ ಆತನ ಔದ್ಧತ್ಯವನ್ನು ಮುರಿದು ಆತನನ್ನು ಹೇಗೆ ವಶಮಾಡಿಕೊಳ್ಳಬೇಕೆಂಬುದೇ ಈ ಹೊತ್ತಿನ ಮುಖ್ಯಪ್ರಶ್ನೆಯು. ಆದುದರಿಂದ ನಿಮ್ಮೊಳಗಿನ ಯಾರು ಈ ಕೆಲಸವನ್ನು ಒಪ್ಪಿಸಿಕೊಳ್ಳಲು ಸಿದ್ಧರಿರುವಿರೆಂಬುದನ್ನು ಹೇಳಿರಿ. ಶಿವಾಜಿಯ ಬಂಡಾಯವನ್ನು ನಿಲ್ಲಿಸಿ ಆತನನ್ನು ವಿಜಾಪುರಕ್ಕೆ ಹಿಡಿದು ತರುವ ಕೆಲಸವು ಕಠಿಣವೆಂಬುದೇನೋ ನಿಜವೇ. ಆದರೆ ನಿಮ್ಮಂತಹ ಶೂರರಿಗೆ ಅಷ್ಟೇನೂ ಕಠಿಣವೆನಿಸಲಿಕ್ಕಿಲ್ಲ! ಹೇಳಿರಿ, ಈ ಕೆಲಸಕ್ಕೆ ಯಾರು ಸಿದ್ಧರಿರುವಿರಿ! ಶಿವಾಜಿಯೊಡನೆ ಕಾದಲು ಯಾರು ಮುಂದಾಳಾಗುವಿರಿ!"

ಇದನ್ನು ಕೇಳಿ ಅನೇಕರು ಎದ್ದು ನಿಂತರು; ಆಗ ವಜೀರನು ಬಜಾಜಿಖಾನನ ಕಡೆಗೆ ಮುಖವನ್ನು ತಿರುಗಿಸಿ ಮಾತನಾಡಿದನು. "ಖಾನಸಾಹೇಬ, ತಾವೇ ಈ ಕೆಲಸವನ್ನು ವಹಿಸಿಕೊಳ್ಳಿರಿ. ತಮಗೆ ಮಹಾರಾಷ್ಟ್ರದ ವಿಷಯವೆಲ್ಲವೂ ಪೂರ್ಣವಾಗಿ ಗೊತ್ತು. ಅವರ ಚಿಕ್ಕ ಪುಟ್ಟ ಸಂಧಾನಗಳೆಲ್ಲವನ್ನೂ ನೀವು ತಿಳಿದಿರುವಿರಿ; ಮತ್ತು ಮರಾಟರಲ್ಲಿ ವೈಮನಸ್ಯವನ್ನು ಹೇಗೆ ಹುಟ್ಟಿಸಬೇಕೆಂಬುದು ನಿಮಗೆ ಚೆನ್ನಾಗಿ ತಿಳಿಯುವದು. ಆದುದರಿಂದ ನೀವೇ ಈ ಕೆಲಸವನ್ನು ಅಂಗೀಕರಿಸಿರಿ. ತಾವು ಈ ಕೆಲಸದಲ್ಲಿ ವಿಜಯಶಾಲಿಗಳಾಗಿ ಬಂದರೆ ಅಫ್‌ಜಲ್‌ಖಾನರಂತಹರ ಮುಖವು ತನ್ನಿಂದ ತಾನೇ ಕಪ್ಪಾಗುವುದು; ಮತ್ತು

ಹಿಡಿದು ತಂದ ಶಿವಾಜಿಯನ್ನು ಹೇಗೆ ನಡಿಸಿಕೊಳ್ಳಬೇಕೆಂಬ ವಿಷಯದಲ್ಲಿ ಅಧಿಕಾರಯುಕ್ತವಾದ ವಾಣಿಯಿಂದ ನಿಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸಮರ್ಥರಾಗುವಿರಿ. ನಿಮಗೆ ಇಚ್ಛಿತರಾದ ಸರದಾರರನ್ನು ಸಂಗಡ ಕರೆದು ಕೊಳ್ಳಿರಿ; ಮತ್ತು ಈ ಕಾಳಗದಲ್ಲಿ ವಿಜಯುವನ್ನು ಪಡೆಯಿರಿ."

ಬಜಾಜೀಖಾನನು ಮತ್ತೊಮ್ಮೆ ಬಾದಶಹನಿಗೆ ವಿನಯದಿಂದ ಸಲಾಮು ಮಾಡಿದನು. ಆಮೇಲೆ ಹೀಗೆ ಹೇಳಿದನು. " ಶಹಾನಶಹಾ, ನಾಲ್ಕು ತಿಂಗಳುಗಳ ಒಳಗಾಗಿ ಶಿವಾಜಿಯನ್ನು ತಂದು ತಮ್ಮ ಪಾದಗಳ ಮೇಲೆ ಕೆಡಹುವೆನು. ನಾಲ್ಕು ತಿಂಗಳುಗಳ ಮೇಲೆ ಆತನ ಪುಂಡಾಟವು ತಮ್ಮ ಕಿವಿಯ ಮೇಲೆ ಬೀಳಲಿಕ್ಕಿಲ್ಲ; ತಮ್ಮ ಕೃಪೆಯಿಂದ ನಾನು ಈ ಕೆಲಸವನ್ನು ಜಯಿಸಿಕೊಂಡು ಬರುವೆನು!"

ಈ ಪ್ರಕಾರವಾಗಿ ಬಜಾಜೀಖಾನನು ಪ್ರತಿಜ್ಞೆಯನ್ನು ಮಾಡಿದ ಬಳಿಕ ಆ ದಿವಸದ ದರಬಾರದ ಕೆಲಸವು ಮುಗಿಯಿತು!

## ನಾಲ್ಕನೆಯ ಪ್ರಕರಣ



## ತ್ರಿವೇಣೀ ಸಂಗಮು !





ವೃದ್ಧನಾದ ಅದಿಲಶಹನು ಸಂಧ್ಯಾಕಾಲದಲ್ಲಿ ತನ್ನ ವಿಲಾಸಮಂದಿರದಲ್ಲಿ ಕುಳಿತುಕೊಂಡು ಗುಡಗುಡಿಯನ್ನು ಸೇದುತ್ತಿದ್ದನು. ಕೆಲವರು ಗಾಳಿಯನ್ನು ಬೀಸುತ್ತಿದ್ದರು; ಮತ್ತೆ ಕೆಲವರು ಆತನ ದರಬಾರದ ಉಡಿಗೆ ತೊಡಿಗೆಗಳನ್ನು ತೆಗೆದು ಬೇರೆ ಉಡುಪುಗಳನ್ನು ಹಾಕುತ್ತಿದ್ದರು. ನವಯುವತಿಯರು ಆತನ ಮುಂದೆ ಮೊಳಕಾಲನ್ನೂರಿ ಕುಳಿತುಕೊಂಡಿದ್ದರು. ಬಾದಶಹನು ತನ್ನ ವಿಲಾಸಿಸ್ವಭಾವಕ್ಕನುಸಾರವಾಗಿ ಮೆಲ್ಲನೆ ಅವರ ಗಲ್ಲವನ್ನೊಮ್ಮೆ ಹಿಂಡುವನು; ಮತ್ತೊಮ್ಮೆ 'ಚಪ್ಪನೆ' ಗಲ್ಲದ ಮೇಲೆ ಹೊಡೆಯುವನು; ಇನ್ನೊಮ್ಮೆ ಅವರ ತಲೆಗಳ ಮೇಲೆ ಕಯ್ಯಾಡಿಸುವನು; ಮತ್ತು ಪ್ರಸಂಗವಶದಿಂದ ಅವರ ಅವಯವ ವಿಶೇಷಗಳನ್ನು ಕಯ್ಯಿಂದ ಹಿಡಿದು ಹುಡುಗಾಟಿಕೆಯನ್ನು ಮಾಡುವನು. ಆ ತರುಣಿಯರಾದರೂ, ಆನಂದದಿಂದ ನಗುತ್ತಿದ್ದರು. ಬಾದಶಹನು ಯಾರ ಕಡೆಗೆ ಹೆಚ್ಚಾಗಿ ಲಕ್ಷ್ಯ ಕೊಡುವನು! ಆತನ ಕೈಯಿಂದ ಯಾರ ಗಲ್ಲವು ಹೆಚ್ಚು ಪೆಟ್ಟುಗಳ ಮಾನವನ್ನು ಹೊಂದುವುದು! ಯಾರ ಗಲ್ಲವು ಬಾದಶಹನ ಹಸ್ತಸ್ಪರ್ಶದಿಂದ

ಹೆಚ್ಚಾಗಿ ಕೆಂಪಾಗುವನು ? ಎಂಬುದನ್ನೇ ಆ ತರುಣಿಯುರು ನಿರೀಕ್ಷಿಸುತ್ತಿದ್ದರು. ಇದೇ ಅವರ ಆಯುಷ್ಯದ ಧ್ಯೇಯವಾಗಿತ್ತು; ಅದಕ್ಕೋಸರವೇ ಅವರು ಜೀವಿಸಿದ್ದರು. ಆ ತರುಣಿಯರು ಪರಸ್ಪರವಾಗಿ ಜಗಳಾಡುತ್ತಿದ್ದರು. ಆದರೆ ಆ ಜಗಳವು, ಯಾರಿಗೆ ಬಾದಶಹನ ಹೊಡತಗಳು ಹೆಚ್ಚಾಗಿ ಬಿದ್ದಿವೆಯೆಂಬ ವಿಷಯವಾಗಿಯೇ ಇರುತ್ತಿತ್ತು. ಬಾದಶಹನ ಅಂತಃಪುರದಲ್ಲಿ ಈ ರಮಣಿಯರ ಸಮಾವೇಶವಾಗಿದ್ದಿಲ್ಲ; ಆದರೆ ಆತನ ವಿಲಾಸಗೃಹದಲ್ಲಿ ಅವರು ಅಧಿಕೃತರಾಗಿದ್ದರು. ಆದುದರಿಂದ ಅಂತಃಪುರನಿವಾಸಿಸಿಯರಿಗೆ ಸಾಮಾನ್ಯಚಿಹ್ನವಾದ ಗೋಷಾದಿಂದ ಅವರು ಮುಕ್ತರಾಗಿದ್ದರು. ಆದರೂ ಅಂತಃಪುರದೊಗಿನ ಅಸಹ್ಯಕರವಾದ ವಿಲಾಸವನ್ನುಪಭೋಗಿಸುವದು ಮಾತ್ರ ಅವರ ದೈವದಲ್ಲಿತ್ತು. ಹೀಗಿದ್ದರೂ ಅವರು ತಮ್ಮಷ್ಟಕ್ಕೆ ತಾವು ಕೃತಕೃತ್ಯರೆಂದೇ ತಿಳಿದಿದ್ದರು. ಕ್ವಚಿತ್ಪ್ರಸಂಗದಲ್ಲಿ ಮಾತ್ರ ಅವರಿಗೆ ಕಿಂಚಿದ್ವಿಷಾದವಾಗುತ್ತಿತ್ತು. ಆದರೆ ಆ ವಿಷಾದಕ್ಕೆ ಬೇರೆಯಾವುದೂ ಕಾರಣವಿರದೆ ಅದಿಲಶಹನು ವೃದ್ಧನಾಗಿದ್ದಾನೆಂಬದೇ ಆಗಿತ್ತು. ಪೂರ್ಣಯೌವನವತಿಯರಾದ ಹದಿನೇಳು ಹದಿನೆಂಟು ವರುಷಗಳ ವಯಸ್ಸಿನ ಇಂತಹ ತರುಣ ಸುಂದರಿಯರನ್ನು ವಿಜಾಪುರದ ಪ್ರಾಂತದೊಳಗಿಂದ ಹುಡುಕಿ ತಂದು ಬಾದಶಹನ ವಿಲಾಸಭುವನದಲ್ಲಿಡುವುದು ಆಗಿನ ಕಾಲದ ಸರದಾರರೆಲ್ಲರಿಗೆ ವಂಶಪರಂಪರಾಗತವಾದ ಧರ್ಮವೇ ಆಗಿತ್ತು' ಪಾಪ! ಆ ಬಡಹೆಣ್ಣುಮಕ್ಕಳು ಒಮ್ಮೆ ರಾಜಮಂದಿರದಲ್ಲಿ ಕಾಲನ್ನಿಟ್ಟರೆಂದರೆ ತೀರಿತು; ಮುಂದೆ ಅವರ ಆಪ್ತೇಷ್ಟರ ದರ್ಶನವು ಅವರಿಗೆ ಎಂದೂ ಆಗುವಂತಿಲ್ಲ ! ಅಪ್ಪಿ ತಪ್ಪಿ ಅಂತಹರ ದರ್ಶನವು ಸಂಘಟಿಸಿದರೂ ರಾಜನು ಸಾಕ್ಷಾದ್ವಿಷ್ಣುಸ್ವರೂಪನಾದುದರಿಂದ ಆ ವಿಷಯವಾಗಿ ಆಕ್ಷೇಪಣೆಯನ್ನು ತೆಗೆಯಲು ಯಾರಿಗೂ ಧೈರ್ಯವಾಗುತ್ತಿದ್ದಿಲ್ಲ !

ದರಬಾರದೊಳಗಿನ ಕೆಲಸಬೊಗಸೆಗಳಿಂದ ಬೇಸರವುಂಟಾದುದರಿಂದ ಮುದುಕನಾದ ಅದಿಲಶಹನು ವಿಲಾಸಮಂದಿರದಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತ ಕುಳಿತುಕೊಂಡಿದ್ದನು. ಬಾದಶಹನಿಂದ ಪಾಪವು ಎಂದೂ ಸಂಘಟಿಸಲಾರದೆಂಬುದು ರಾಜನೀತಿಯ ತ್ರಿಕಾಲಾಬಾಧಿತವಾದ ತತ್ವವಾದುದರಿಂದ ಬೇಕಾದ ಕಾಲದಲ್ಲಿ ಬೇಕಾದ ಕೆಲಸವನ್ನು ಆತನು ಮಾಡಬಹುದಾಗಿತ್ತು. ಜನರಿಗೆ ಅಂಜಿ ನಡೆಯಬೇಕೆಂಬ ಅಳುಬುರುಕತನದ ತತ್ವವು ಇತರ ಜನರಿಗೆ ಮಾತ್ರ ಸಂಬಂಧಿಸುತ್ತದೇ ಹೊರತು ಬಾದಶಹನಿಗಲ್ಲವೆಂಬ ಸಂಗತಿಯನ್ನು ಆತನು ತಿಳಿದಿದ್ದನು. ಆದುದರಿಂದ ಆತನು ಸಂಪೂರ್ಣವಾಗಿ ವಿಲಾಸದಲ್ಲಿ ಮಗ್ನನಾಗಿದ್ದನು.

ಹೀಗೆ ವಿಲಾಸಚೇಷ್ಟೆಗಳನ್ನು ಮಾಡುತ್ತಲೇ ನಿದ್ರಾದೇವಿಯ ಆಲಿಂಗನದಿಂದ ಸೌಖ್ಯವನ್ನು ಹೊಂದಬೇಕೆಂಬ ಬಾದಶಹನ ಅಭಿಲಾಷೆಯು ಇಂದು ಪೂರ್ಣವಾಗಲಿಲ್ಲ. ಮೇಲೆ ಹೇಳಿದಂತೆ ಬಾದಶಹನು ಹೆಂಗೆಳೆಯರ ಸಹವಾಸದಲ್ಲಿ ಕುಳಿತುಕೊಂಡಿದ್ದಾಗ ಭಯಂಕರಾಕಾರನಾದೊಬ್ಬ ಮುಸಲ್ಮಾನನು ಆ ವಿಲಾಸಮಂದಿರದಲ್ಲಿ ಬಂದನು. ಆತನ ಮುಖಮುದ್ರೆಯು ಕ್ರೂರವಾಗಿಯೂ, ಕಣ್ಣುಗಳು ಕೆಂಪಗಾಗಿಯೂ ಇದ್ದುವು. ಆತನ ಗಡ್ಡಗಳು ಎದೆಯ ವರೆಗೂ ಉದ್ದವಾಗಿದ್ದುವು. ಆತನ ಕೈಕಾಲು ಮೊದಲಾದ ಅವಯುವಗಳನ್ನು ನಿರೀಕ್ಷಿಸಿದರೆ, ಮದವೇರಿದ ಕೋಣವನ್ನು ಈತನು ಕುಸ್ತಿಯಲ್ಲಿ ಸೋಲಿಸದೆ ಬಿಡನೆಂದು ಯಾರಿಗಾದರೂ ತಿಳಿಯುವಂತಿತ್ತು. ಆತನ ಕಯ್ಬೆರಳುಗಳು ಕಬ್ಬಿಣದ ಸಲಾಕೆಯನ್ನು ಸಹಜವಾಗಿ ಮಡಿಸಬಹುದೆಂದು ಕಲ್ಪಿಸುವಷ್ಟು ಗಡುತರವಾಗಿಯೂ ಬಲವಾಗಿಯೂ ಇದ್ದವು.ಆತನು ನರದಾರನ ಉಡುವುತೊಡವುಗಳನ್ನು ಹಾಕಿಕೊಂಡಿದ್ದನು; ಮತ್ತು ಒಳ್ಳೆಯ ಉದ್ದಾಮತನದಿಂದ ನಡೆಯುತ್ತಿದ್ದನು. ಎದುರಿನಲ್ಲಿ ಕುಳಿತಿರುವ ಬಾದಶಹನ ಲಕ್ಷ್ಯವೇ ತನಗಿಲ್ಲವೆಂಬಂತೆ ಹೆಮ್ಮೆಯಿಂದ ನಡೆಯುತ್ತ ಅಲ್ಲಿಗೆ ಬಂದನು. ರಾಜಮಂದಿರದಲ್ಲೆಲ್ಲ ಬೇಕಾದಲ್ಲ ತಿರುಗಾಡುವದಕ್ಕೆ ಅವನಿಗೆ ಪ್ರತಿಬಂಧಕವಿದ್ದಿಲ್ಲ; ಆದುದರಿಂದಲೇ ಯಾರಿಗೂ ಹೇಳದೆ ಬಾದಶಹನ ವಿಲಾಸಮಂದಿರದಲ್ಲಿ ಇಂದು ಆತನು ಪ್ರವೇಶಿಸಿದ್ದನು.

ಆತನ ಪಾದಾಘಾತದಿಂದ ಭೂಮಿಯು ನಡುಗುತ್ತಿತ್ತು. ಆತನ ಕಾಲ ಸಪ್ಪಳದಿಂದ ಬಾದಶಹನ ಲಕ್ಷ್ಯವು ಆ ಕಡೆಗೆ ಹೋಯಿತು. ಆ ಸ್ಥೂಲವಾದ ಶರೀರವನ್ನು ಕಂಡು ಬಾದಶಹನು ಕೊಂಚ ಸರಿದು ಕುಳಿತನು. ಆತನ ಬರುವಿಕೆಯಿಂದ ಬಾದಶಹನಿಗೆ ಸಂತೋಷವಾಯಿತೋ ಇಲ್ಲವೋ ತಿಳಿಯದು; ಆದರೂ ಆತನನ್ನು ನೋಡಿದೊಡನೆಯೇ ಬಾದಶಹನು—"ಪ್ಯಾರೇ, ಅಫ್‌ಜಲ್, ಆವೋ." ಎಂದನು.

ಆ ತರುಣ ಮುಸಲ್ಮಾನನೇ ಅಫ್‌ಜಲ್‌ಖಾನನು. ಬಾದಶಹನ ಲಕ್ಷ್ಯವು ತನ್ನಕಡೆಗಾದುದನ್ನು ತಿಳಿದಕೂಡಲೇ ಸಮೀಪದ ಆಸನದ ಮೇಲೆ ಆತನು ಕುಳಿತನು. ಕುಳಿತುಕೊಳ್ಳುವಾಗ ಬಾದಶಹನಿಗೆ ಕಾಣಿಸಿತೋ ಇಲ್ಲವೋ ಎನ್ನುವ ಹಾಗೆ ಒಂದು ಸಾರೆ ಸಲಾಮು ಮಾತ್ರ ಮಾಡಿದನು. ಅಫ್‌ಜಲ್‌ಖಾನನು ಬಂದುದರಿಂದ ಆ ಹುಡಿಗೆಯರು ಮಾತ್ರ ಥರಥರ ನಡುಗುತ್ತಿದ್ದರು. ಆಗ ಬಾದಶಹನು—"ಈ ಹೊತ್ತು ಅಫ್‌ಜಲನಿಗೆ ಬಹಳ ಸಿಟ್ಟುಬಂದಂತೆ ತೋರುತ್ತದೆ!" ಎಂದನು.

ಅಫ್‌ಜಲ್‌ಖಾನನು ಆವೇಶದಿಂದ ನುಡಿದನು:—"ಓಹೋ ! ಸಿಟ್ಟುಬಾರದೆ ಏನುಮಾಡೀತು ? ಆ ನಿಂಬಾಳಕರನು ನಿಮ್ಮ ಹತ್ತರ ಬಂದಾಗಿನಿಂದ ನಿಮಗೆ ಮರಾಟರ ಹುಚ್ಚು ಹತ್ತಿದೆ. ಶಹಾಜೀಭೋಸಲೇ, ಮಾನೇ, ಘಾಟೇ ಮೊದಲಾದ ಮರಾಟಸರದಾರರ ಪ್ರಾಶಸ್ತ್ಯವು ನಮ್ಮ ದರಬಾರದಲ್ಲಿ ವಿಶೇಷವಾಗಿ ಬೆಳೆಯುತ್ತಿದೆ. ಈ ಮರಾಟರು ಹೊರಗಿನಿಂದ ರಾಜನಿಷ್ಠರಂತೆ ತೋರಿದರೂ ಒಳಗಿಂದೊಳಗೇ ಬಾದಶಹನ ವಿರುದ್ಧವಾಗಿ ಸಂಚು ನಡಿಸಿರುತ್ತಾರೆ. ಇವರು ಯಾವ ಕಾಲಕ್ಕೆ ಒಂದಾಗುವರೋ, ಮತ್ತು ಅದಿಲಶಾಹಿಯನ್ನು ಮುಳುಗಿಸುವರೋ ತಿಳಿಯುವ ಹಾಗಿಲ್ಲ. ಆದರೆ ಈ ತಿಳಿವಳಿಕೆಯು ನಿಮ್ಮ ಸ್ವಪ್ನದಲ್ಲಿ ಕೂಡ ಬಂದಿಲ್ಲ. ಆ ಬಜಾಜಿಯ ಪೀಡೆಯು ಈ ವಿಜಾಪುರದ ದರಬಾರಕ್ಕೆ ಬಡಿದುಕೊಂಡಾಗಿನಿಂದ ಮುಖ್ಯ ಮುಖ್ಯ ಮುಸಲ್ಮಾನ ಸರದಾರರೆಲ್ಲರೂ ಮರಾಟರ ಬೊಗಸೆಯಿಂದ ನೀರು ಕುಡಿಯಬೇಕಾಗಿದೆ. ವಿಜಾಪುರದ ದರಬಾರಕ್ಕೆ ಬಜಾಜೀಖಾನನೆಂಬ ಒಂದು ಸಾಂಸರ್ಗಿಕರೋಗವು ಅಂಟಿಕೊಂಡಿದೆ. ಆತನನ್ನು ಮೊದಲೇ ನಾಶ ಮಾಡಿ ಬಿಟ್ಟಿದ್ದರೆ— "

ಬಾದಶಹನು ನಡುವೇ ಸೌಮ್ಯಸ್ವರದಿಂದ ಹೇಳಿದನು :— " ಅಫ್‌ಜಲ್, ನೀನು ವ್ಯರ್ಥವಾಗಿ ತಲೆಗೆ ತೊಂದರೆಯನ್ನುಂಟುಮಾಡಿಕೊಳ್ಳುತ್ತೀ. ಮರಾಟರ ಪ್ರಸ್ಥವು ಬೆಳೆಯಬಾರದೆಂದೇ ನಾನು ಬಜಾಜಿಯ ಚಂಡಿಕೆಯನ್ನು ತೆಗೆಯಿಸಿ ಗಡ್ಡವನ್ನು ಬೆಳೆಯಿಸಲಿಲ್ಲವೇ ? ಶಹಾಜಿ ಭೊಸಲೆಯ ಅಧಿಕಾರವು ಕುಂಠಿತವಾಗ ಬೇಕೆಂದೇ ನಾನು ಬಜಾಜಿಯ ಸುನತೀಮಾಡಿಸಿ ಶಹಾಜಿಗೆ ಆತನ ಸಾಹಾಯ್ಯವನ್ನು ತಪ್ಪಿಸಿದೆನು. ನಾನು ಆಗಲೇ ಆತನನ್ನು ನಾಶಮಾಡಿದ್ದರೆ, ಎಲ್ಲ ಮರಾಟರೂ ಒಂದಾಗಿ ವಿಜಾಪುರದ ಮೇಲೆ ದಂಡೆತ್ತಿ ಬರುತ್ತಿದ್ದರು. ಮರಾಟ ಸರದಾರರ ಆಗ್ರಹದಿಂದ ನಾನು ಬಜಾಜಿಗೆ ಜೀವದಾನಕೊಟ್ಟದ್ದರಿಂದ ನಾನು ಅವರ ಮಾತನ್ನು ಪಾಲಿಸಿದ ಭಾರವೊಂದು ಅವರ ಮೇಲೆ ಇದ್ದ ಹಾಗಾಯಿತು. ಆದುದರಿಂದ ಅವರು ನನ್ನ ವಿರುದ್ಧವಾಗಿ ಯಾವ ಕೆಲಸವನ್ನೂ ಮಾಡದಂತಾಗಿದೆ. ಇತ್ತ ಬಜಾಜೀ ನಿಂಬಾಳಕರನನ್ನು ಬಜಾಜೀಖಾನನನ್ನಾಗಿ ಮಾಡಿದುದರಿಂದ ಒಂದು ರೀತಿಯಿಂದ ಮರಾಟರ ಮೇಲೆ ದರ್ಪವನ್ನೂ ಕೂಡ್ರಿಸಿದಂತಾಗಿದೆ. ಸ್ವಲ್ಪ ಶಾಂತರೀತಿಯಿಂದ ವಿಚಾರಮಾಡು. ಅಂದರೆ ನಾನು ಮಾಡಿದುದು ಯೋಗ್ಯವೇ ಆಗಿದೆಯೆಂದು ನಿನಗೆ ತಿಳಿದುಬರುವುದು. ಬಜಾಜಿಯನ್ನು ಮುಸಲ್ಮಾನನನ್ನಾಗಿ ಮಾಡಿ ಆತನನ್ನು—"

ಬಾದಶಹನ ಕೊನೆಯ ವಾಕ್ಯವು ಪೂರ್ಣವಾಗುವುದರೊಳಗಾಗಿಯೇ ಅಫ್ ಜಲ್‌ಖಾನನು ಅತ್ಯಂತಾವೇಶದಿಂದ ಮಾತಾಡಹತ್ತಿದನು. "ಹಾ! ತಿಳಿಯಿತು! ನೀವು ಆ ಬಡಮಾಷನನ್ನು ಮುಸಲ್ಮಾನರ ತಲೆಯ ಮೇಲೆ ಏರಿಸಿದಿರಿ. ಮುಸಲ್ಮಾನ ಬಂಧುಗಳನ್ನು ಕಾಲ ಕಸವೆಂದು ಭಾವಿಸಿ ಆ ಕೃತಘ್ನನಾದ ದುಷ್ಟಮಹಾರಾಷ್ಟ್ರನಿಗೆ ಸರದಾರನ ಪದವಿಯನ್ನು ಕೊಟ್ಟಿರಿ. ಈ ಅಫ್‌ಜಲ್‌ಖಾನನು ತಮ ಹೊಟ್ಟೆಯ ಮಗನಾಗಿದ್ದರೂ, ಆ ದರಿದ್ರ ನಿಂಬಾಳಕರನು ದರಬಾರದಲ್ಲಿ ನನಗಿಂತಲೂ ಹೆಚ್ಚಾಗಿ ಪುರಸ್ಕೃತನಾಗಿದ್ದಾನೆ. ಬಾದಶಹನ ಮಗನೂ ಯುವರಾಜನೂ ಆದ ನಾನು ಮೂಲೆಯಲ್ಲಿ ಕುಳಿತುಕೊಳ್ಳಬೇಕು; ಮತ್ತು ಆ—"

**ಬಾದಶಹ**:— ಅಫ್‌ಜಲ್, ಶಾಂತನಾಗು. ನೀನು ನನ್ನ ಮಗನೆಂಬ'ದೇನೋ ನಿಜ. ಆದರೆ ಬೇಗಮಳಿಂದ ಹುಟ್ಟಿದವನಲ್ಲ. ನಿನ್ನಂತಹ ಮಗನು ಸಿಂಹಾಸನಕ್ಕೆ ಸ್ವಾಮಿತ್ವವುಳ್ಳವನಾಗಿದ್ದರೆ ನನಗೆ ಆನಂದವೇ ಆಗುತ್ತಿತ್ತು. ವಿಜಾಪುರದ ರಾಜಚ್ಛತ್ರವನ್ನು ಸಂರಕ್ಷಣಮಾಡುವುದಕ್ಕೆ ನೀನು ಪೂರ್ಣವಾಗಿ ಸಮರ್ಥನಾಗಿರುತ್ತೀಯೆಂಬುದನ್ನು ನಾನು ಬಲ್ಲೆನು. ಆದರೆ ನೀನು ಬೇಗಮಳ ಮಗನಲ್ಲವಾದುದರಿಂದ ಬಹಿರಂಗವಾಗಿ ನಿನ್ನನ್ನು ಯುವರಾಜನೆಂದು ಕರೆಯುವಂತಿಲ್ಲ. ನಿನಗೆ ಈಗ ನಾನು ಕೊಟ್ಟಿರುವ ದೊಡ್ಡ ಅಧಿಕಾರದ ವಿಷಯವಾಗಿ ಎಷ್ಟೋ ಸರದಾರರು ಆಕ್ಷೇಪಣೆಗಳನ್ನು ತೆಗೆಯುತ್ತಾರೆ. ಆದರೂ ನೀನು ನನ್ನ ಮಗನೆಂಬುದನ್ನು ಲಕ್ಷ್ಯಕ್ಕೆ ತಂದು ಬಜಾಜಿಯ ಕೆಳಗಿನ ಪದವಿಯನ್ನು ನಿನಗೆ ಕೊಟ್ಟಿದ್ದೇನೆ. ನೀನು ನನಗೆ ಬೇಗಮಳಿಂದ ಜನಿಸಿದವನಲ್ಲವಾದ—"

**ಅಫ್‌ಜಲ್**:—ಆದರೇನಾಯಿತು? ನಾನು ನಿಮ್ಮ ಹೊಟ್ಟೆಯಿಂದ ಹುಟ್ಟಿದವನೆಂಬುದು ಸುಳ್ಳಲ್ಲವಷ್ಟೇ; ನನ್ನ ತಾಯಿಯು ಬೇಗಮಳಾಗದೆ ಭಿಕ್ಷುಕಿಯೂಗಿದ್ದರೂ ಇರಲಿ! ನಾನು ಬಾದಶಹನ ಮಗನಂತೂ ನಿಜವಷ್ಟೇ? ಅಂದಮೇಲೆ ನಾನು ಯುವರಾಜನಲ್ಲವೇ?

**ಬಾದಶಹ**:—ಅಫ್‌ಜಲ್, ಹುಚ್ಚನಂತೆ ಮಾತನಾಡಿದರೆ ಪ್ರಯೋಜನವೇನು? ನಾನು ಒಂದು ವೇಳೆ ನಿನ್ನನ್ನು ಯುವರಾಜನೆಂದು ಕರೆದರೂ ಇತರ ಸರದಾರರು—ಹಿಂದುಗಳನ್ನು ಬಿಟ್ಟುಬಿಡು, ಮುಸಲ್ಮಾನರಾದರೂ—ನಿನ್ನನ್ನು ಯುವರಾಜನೆಂದು ತಿಳಿಯುವರೆಂದು ಭಾವಿಸುವೆಯಾ? ವಿಜಾಪುರದಲ್ಲೆಲ್ಲ ಅನಾಯಕತ್ವವು ಆರಂಭವಾಗಿ ಕ್ಷಣಾವಕಾಶದಲ್ಲಿಯೇ ಆದಿಲಶಾಹಿಯು ನಷ್ಟವಾಗಿ ಹೋದೀತು! ನೀನು ನನ್ನ ಮಗನೇನೋ ನಿಜ; ಆದರೆ ನಿನ್ನನ್ನು ಯುವರಾಜನೆಂದು ಬಹಿರಂಗವಾಗಿ ಕರೆಯಲಾರೆನು.

**ಅಫ್ ಜಲ್**:—ನಾಲ್ಕು ಜನರಲ್ಲಿ ಯುವರಾಜನೆಂದು ನನ್ನನ್ನು ಕರೆಯಲು ನಿಮಗೆ ಧೈರ್ಯವಿಲ್ಲದಿದ್ದರೆ, ನನ್ನನ್ನು ನಿಮ್ಮ ಅಳಿಯನನ್ನಾಗಿ ಏಕೆ ಮಾಡಿಕೊಳ್ಳಲಿಲ್ಲ ? ಆ ಧರ್ಮಲಂಡನಾದ ಬಜಾಜಿಗೆ ರೋಷನಳನ್ನು ಕೊಡುವದಕ್ಕಿಂತ ನನ್ನೊಡನೆ ಆಕೆಯ ವಿವಾಹವನ್ನು ಮಾಡಿದ್ದರೆ ಎಷ್ಟೊಂದು ಚೆನ್ನಾಗಿರುತ್ತಿತ್ತು ! ನಾನು ನಿಮ್ಮ ಮಗನೆಂಬುದು ಸಿದ್ಧವಾಗುವ ವರೆಗೆ ಈ ವಿವಾಹಕ್ಕೆ ಮುಸಲ್ಮಾನೀ ಧರ್ಮದ ನಿಯಮಗಳು ಪ್ರತಿಬಂಧಕವಾಗುತ್ತಿದ್ದಿಲ್ಲವಷ್ಟೇ ! ಆ ಕಾಫರನಿಗೆ ಈ ಸುಕುಮಾರಿಯನ್ನು ಕೊಡುವದಕ್ಕಿಂತ ನಿಜವಾದ ಮುಸಲ್ಮಾನನಾದ ಈ—

**ಬಾದಶಹ**:—ಅಫ್‌ಜಲ್, ಮನಬಂದಂತೆ ಹೀಗೆ ಬಡಬಡಿಸಬೇಡ. ಜನರಲ್ಲಿಲ್ಲದಿದ್ದರೂ ನಾನು ಮನಸ್ಸಿನಲ್ಲಾದರೂ ನಿನ್ನನ್ನು ಮಗನೆಂದು ತಿಳಿಯುತ್ತೇನೆ ! ನಿನಗೆ ಏನೇನು ಕೊಡುವುದು ಶಕ್ಯವಿದೆಯೋ ಅದೆಲ್ಲವನ್ನೂ ನಾನು ಕೊಡುತ್ತೇನೆ!

**ಅಫ್ ಜಲ್**:—ಆದರೆ, ಆ ಕಾಫರನು ನಿಮ್ಮ ಅಳಿಯನಾದುದರಿಂದ ಯಾವಾಗಲೂ ನನ್ನ ತಲೆಯ ಮೇಲೆ ಮೆಣಸು ಅರೆಯುವನು ! ಎಲ್ಲಿ ಹೋದರೂ ಆತನಿಗೇ ಮಾನಮರ್ಯಾದೆಯು ಹೆಚ್ಚಾಗುವುದು ! ಹೋದಲ್ಲೆಲ್ಲ ನಾನು ಆತನಿಗೆ ಬಾಗಿ ನಡೆಯಬೇಕಾಗುವುದು ! ಇಷ್ಟೊಂದು ಬಹುಮಾನವು ಆ ಕಾಫರನಿಗೆ ದೊರೆತುದರಿಂದ ಆತನ ಕಣ್ಣುಗಳು ನೆತ್ತಿಯ ಮೇಲೆ ಹೋಗಿವೆ ! ಮುಸಲ್ಮಾನ ಸರದಾರರಾದ ನಮ್ಮನ್ನು ಆತನು ತುಚ್ಛವಾಗೆಣಿಸುತ್ತಾನೆ ! ಆತನ ಮನಸ್ಸು ಮುಸಲ್ಮಾನರ ಕಡೆಗೆ ಎಳ್ಳಷ್ಟಾದರೂ ಇಲ್ಲ. ಆತನು ಮನಃಪೂರ್ವಕವಾಗಿ ಮರಾಟರ ಹಿತವನ್ನೇ ಬಯಸುತ್ತಾನೆ. ಅಷ್ಟು ದೂರ ಏಕೆ ? ಈ ಹೊತ್ತಿನ ಉದಾಹರಣೆಯನ್ನೇ ನೋಡಿರಿ. ಶಹಾಜಿಯು ಶಿವಾಜಿಯ ಬಂಡಾಯಕ್ಕೆ ಅನುಕೂಲನಾಗಿರಬಹುದೆಂದು ನಾನು ದರಬಾರದಲ್ಲಿ ಪ್ರತಿಪಾದಿಸಿದ ಕೂಡಲೇ, ಆತನು ಎಷ್ಟೊಂದು ಕೋಪಾವಿಷ್ಟನಾದನು ನೋಡಿದಿರಾ ! ಮರಾಟರನ್ನು ಆತನು ಎಷ್ಟು ಬಣ್ಣಿಸಿದನು ಕೇಳಿದಿರಾ! ಈ ಐಶ್ವರ್ಯವನ್ನೆಲ್ಲ ಆತನಿಗೆ ಮರಾಟರೇ ಕೊಟ್ಟರೇನು ?

**ಬಾದಶಹ**:—ಅಫ್‌ಜಲ್, ನೀನು ಬಜಾಜೀಖಾನನ ಮಾತಿಗೆ ವಿಪರೀತವಾದ ಅರ್ಥವನ್ನು ಮಾಡುತ್ತಿರುವೆ. ಮಾರಾಟಸರದಾರರಿಗೆ ಅಸಂತೋಷವನ್ನುಂಟುಮಾಡಿದರೆ ಪರಿಣಾಮವು ನೆಟ್ಟಗಾಗುವುದಿಲ್ಲವೆಂದು ತಿಳಿದಿರುವುದರಿಂದಲೇ ಆತನು ಹಾಗೆ ಮಾತನಾಡಿದನು. ಅದು ರಾಜನೀತಿಯ ಗುಟ್ಟು ! ನಿನ್ನಂತಹ ಶೂರವೀರನಿಗೆ ಅದರ ಮರ್ಮವು ತಿಳಿಯಲಾರದು. ನಮ್ಮಲ್ಲಿರುವ ಮರಾಟರೆಲ್ಲರೂ ಶಿವಾಜಿಯನ್ನು ಕೂಡಿಕೊಂಡರೆ ಅಲ್ಪಾವಕಾಶದಲ್ಲಿಯೇ ವಿಜಾಪುರವನ್ನು

ಅವರು ಪಾದಾಕ್ರಾಂತಮಾಡುವರೆಂಬುದನ್ನು ಬಜಾಜಿಯು ತಿಳಿದಿದ್ದಾನೆ. ಆದುದರಿಂದಲೇ ಆತನು ಉಳಿದ ಮಾರಾಟಸರದಾರರ ಮನಸ್ಸನ್ನು ಒಲಿಸುತ್ತಲಿದ್ದಾನೆ. ಶಿವಾಜಿಯನ್ನು ಹಿಡಿದು ಆತನಿಗೆ ತಕ್ಕ ಶಾಸನವನ್ನು ವಿಧಿಸಿದರೆ ಉಳಿದವರನ್ನು ನಿರಾಯಾಸವಾಗಿ ಪ್ರತಿಬಂಧಿಸಬಹುದು. ಮರಾಟಸರದಾರರ ಪ್ರಸ್ಥವನ್ನು ಬೆಳೆಯಗೊಡಬಾರದೆಂಬುದು ನನಗೆ ಚೆನ್ನಾಗಿ ಗೊತ್ತಾಗಿದೆ. ಅವರು ಬರಬರುತ್ತ ತಲೆಹೊರೆಯಾಗುತ್ತ ನಡೆದಿರುವರೆಂಬುದೂ ನನ್ನ ಲಕ್ಷ್ಯದಲ್ಲಿದೆ. ಇದನ್ನೆಲ್ಲ ತಿಳಿದೇ ನಾನು ಈ ಬಜಾಜೀಖಾನನನ್ನು ಮುಂದೆ ಮಾಡಿದ್ದೇನೆ.

**ಅಫ್‌ಜಲ್**:—ತಮ್ಮ ತರ್ಕವು ಈ ವಿಷಯದಲ್ಲಿ ತಪ್ಪಾಗಿದೆ. ತಾವು ಮರಾಟಸರದಾರರ ಮೇಲೆ ವರ್ಚಸ್ಸನ್ನು ಕೂಡಿಸುವುದಕ್ಕಾಗಿ ಬಜಾಜೀಖಾನನಿಗೆ ಆಶ್ರಯವನ್ನು ಕೊಟ್ಟಿರಿ; ಆದರೆ ಅವನೇ ಈಗ ತಲೆಗೆ ಏರಿ ಕುಳಿತಿದ್ದಾನೆ. ಈಗ ವಿಜಾಪುರದಲ್ಲಿ ಆತನು ಹೇಳಿದುದೇ ಪೂರ್ವದಿಕ್ಕಾಗಿದೆ.

**ಬಾದಶಹ**:—ಆದರೇನಾಯಿತು ? ಅದಿಲಶಾಹೀ ರಾಜ್ಯವೇ ತನ್ನದೆಂದು ಆತನು ತಿಳಿದಿದ್ದಾನೆ. ಮುಸಲ್ಮಾನೀ ಧರ್ಮವೇ ಆತನದಾಗಿದೆ. ಈ ಹೊತ್ತಿನ ದರಬಾರದಲ್ಲಿ ಆತನು ಹೀಗೆ ಸ್ಪಷ್ಟವಾಗಿ ಅಂದು ತೋರಿಸಲಿಲ್ಲವೇ ?

**ಅಫ್‌ಜಲ್**:—ಸರಕಾರ, ಅವೆಲ್ಲವೂ ಶುದ್ಧದಾಂಭಿಕತೆಯು. ಬಜಾಜೀಖಾನನು ತೋರಿಕೆಗೆ ಗಡ್ಡವನ್ನು ಬೆಳೆಯಿಸಿದ್ದರೂ ಅತನ ಹೃದಯದಲ್ಲಿ ಹಿಂದೂಧರ್ಮವೇ ತುಂಬಿದೆ. ಆತನು ನಿಜವಾಗಿಯೂ ಮರಾಟರ ಹಿತವನ್ನೇ ಬಯಸುತ್ತಾನೆಂದು ನನಗಂತೂ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆತನು ಬಾಯಿಂದ ಬೇಕಾದಂತಹ ಬಣ್ಣದ ಮಾತುಗಳನ್ನಾಡಲೊಲ್ಲನೇಕೆ ? ಆದರೂ ಮುಸಲ್ಮಾನನಾದುದರಿಂದ ಆತನಿಗೆ ಪಶ್ಚಾತ್ತಾಪವಾಗುತ್ತಿರಬೇಕೆಂದು ನನಗಂತೂ ತೋರುತ್ತದೆ. ಹಿಂದುವು ಬೇಕಾದಾಗ ಮುಸಲ್ಮಾನನಾಗಬಹುದು; ಅದರೆ ಒಮ್ಮೆ ಮುಸಲ್ಮಾನನಾದ ಹಿಂದುವು ಮತ್ತೆ ಹಿಂದುವಾಗಲಾರನೆಂಬುದು ನಮಗೆ ಅನುಕೂಲವಾಗಿದೆ. ಇಲ್ಲದಿದ್ದರೆ ಆತನು ಈ ಮೊದಲೇ ತಿರುಗಿ ಹಿಂದುವಾಗುತ್ತಿದ್ದನು. ಆದುದರಿಂದ ನೀವು ಬರಿಯ ಆತನ ಗಡ್ಡಗಳ ಮೇಲೆ ನಂಬಿಗೆಯನ್ನಿಡಲಾಗದೆಂದು ಸೂಚಿಸುತ್ತೇನೆ. ಆತನ ಮೈಯಲ್ಲಿ ಮರಾಟರ ರಕ್ತವು ಹರಿಯುತ್ತಲಿದೆ; ಆದುದರಿಂದ ಆತನು ಹಿಂದೂಧರ್ಮದ ಅಭಿವೃದ್ಧಿಯನ್ನೂ ಮಾರಾಟರ ಉತ್ಕರ್ಷವನ್ನೂ ಮನಃಪೂರ್ವಕವಾಗಿ ಬಯಸುತ್ತಾನೆ.

“ ಅಪ್ಪಾ ಅಣ್ಣನು ಹೇಳಿದ ಮಾತು ಸುಳ್ಳಲ್ಲ. ” ಈ ಪ್ರಕಾರದ ಮಂಜುಲ

ವಾದ ಶಬ್ದಗಳು ಆಗ ಇಬ್ಬರಿಗೂ ಕೇಳಿಸಿದವು. ಕೂಡಲೆ ಆಶ್ಚರ್ಯದಿಂದ ಅವರಿಬ್ಬರೂ ಮೇಲಕ್ಕೆ ನೋಡಿದರು. ಕಾಲೊಳಗಿನ ನೂಪುರಗಳಿಂದ ಮಂಜುಲವಾದ ಧ್ವನಿಯು ಉತ್ಪನ್ನವಾಗುತ್ತಿರಲು, ರೋಷನಬೇಗಮಳು ಆ ವಿಲಾಸ ಮಂದಿರದಲ್ಲಿ ಬಾದಶಹನು ಕುಳಿತಲ್ಲಿಗೆ ಬರುತ್ತಿದ್ದಳು. ಅಫ್‌ಜಲ್‌ಖಾನನು ಎದ್ದು ನಿಂತು ಅವಳನ್ನು ಸತ್ಕರಿಸಿದನು. ಬಾದಶಹನು ರೋಷನಳನ್ನು ತನ್ನ ಹತ್ತರದಲ್ಲಿಯೇ ಕುಳ್ಳಿರಿಸಿಕೊಂಡನು. ಮತ್ತು ಪ್ರೇಮಭರದಿಂದ ಆಕೆಯ ಬೆನ್ನಮೇಲೆ ಕಯ್ಯಾಡಿಸುತ್ತ ಕೇಳಿವನು;—“ ಮಗಳೇ ಏನು ಹೇಳುತ್ತಿದ್ದೆ ? ನಿನ್ನ ಗಂಡನು ಹಿಂದೂಧರ್ಮವನ್ನೇ ಪ್ರೀತಿಸುತ್ತಾನೆಂಬ ಸಂಶಯವು ನಿನಗೂ ಹುಟ್ಟಿದೆಯೇನು ? ”

ಬೇಗಮಳು ಮುದ್ದಿನಿಂದ ಮಾತನಾಡಿದಳು. “ ಅಪ್ಪಾ, ಈಚೀಚೆಗೆ ಅವರು ಬಹಳ ಚಿಂತಾತುರರಾಗಿರುತ್ತಾರೆ; ಯಾವ ವಿಲಾಸಕ್ಕೂ ಮನಸ್ಸು ಮಾಡುವದಿಲ್ಲ. ಒಮ್ಮೊಮ್ಮೆ ಮರಾಟಸರದಾರರ ಮಾತುಗಳು ಹೊರಟರೆ ಅವರು ಒಮ್ಮೆಲೇ ಗಾಬರಿಯಾಗುತ್ತಾರೆ. ಒಮ್ಮೆಯಂತೂ ಅವರು— “ ನಾನು ನಿಜವಾಗಿಯೂ ಮರಾಟನಿದ್ದೇನೆ ” ಎಂದು ತಟ್ಟನೆ ನುಡಿದರು. ಅಪ್ಪಾ ವಿಲಾಸಭೋಗಗಳಲ್ಲಿ ಕಾಲಕಳೆಯಬೇಕಾದ ವಯಸ್ಸಿನಲ್ಲಿ ಭ್ರಮಿಷ್ಟರಂತೆ ಇರಹತ್ತಿದರೆ ಏನೆಂದು ತಿಳಿಯಬೇಕು ? ಅವರ ಉದ್ಗಾರಗಳ ಮೇಲಿಂದ ಮುಸಲ್ಮಾನರಾದುದಕ್ಕಾಗಿ ಅವರಿಗೆ ಪಶ್ಚಾತ್ತಾಪವಾಗುತ್ತಿರಬೇಕೆಂದು ನನಗಂತೂ ತೋರುತ್ತದೆ. ನನ್ನ ಮೇಲೆ ಅವರು ಅತ್ಯಂತಪ್ರೇಮವುಳ್ಳವರಾಗಿರುವದರಿಂದ ಎಲ್ಲವೂ ನೆಟ್ಟಗೆ ! ಇಲ್ಲದಿದ್ದರೆ ಅವರು ಎಂದೋ ಇಲ್ಲಿಂದ ಓಡಿಯೇ ಹೋಗುತ್ತಿದ್ದರು. ”

**ಬಾದಶಹ**:—ಮಗಳೇ, ಇಷ್ಟು ದಿವಸಗಳ ವರೆಗೆ ನೀನು ಈ ಸಂಗತಿಯನ್ನು ನನಗೆ ಏಕೆ ತಿಳಿಸಲಿಲ್ಲ ? ಮೊದಲೇ ಹೇಳಿದ್ದರೆ ನಾನು ಅದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡುತ್ತಿದ್ದೆನು. ನಿನಗೆ ಸೌಖ್ಯವಾಗದಿದ್ದರೆ ನನಗೆ ಸಮಾಧಾನವಾಗುವುದೆಂತು ? ಆದರೆ ಬಜಾಜಿಯು ನಿನ್ನಲ್ಲಿಯಾದರೂ ಪೂರ್ಣವಾಗಿ ಅನುರಕ್ತನಾಗಿದ್ದಾನೆಯಷ್ಟೇ ?

ಬೇಗಮಳು ಮತ್ತೂ ಹೆಚ್ಚಾದ ಲಜ್ಜೆಯಿಂದ ಮಾತಾಡಿದಳು:—“ಅಪ್ಪಾ, ನಾನು ಸಮೀಪಕ್ಕೆ ಹೋದೊಡನೆಯೇ ಅವರು ಮೈಮೇಲಿನ ಎಚ್ಚರವನ್ನೇ ಮರೆಯುತ್ತಾರೆ. ನನ್ನನ್ನು ನೋಡಿದೊಡನೆಯೇ ಹುಚ್ಚರಂತೆ ಮಾಡಹತ್ತುತ್ತಾರೆ. ಮೊನ್ನೆ ಅವರು ಯಾವದೋ ಒಂದು ಕಾರಣದಿಂದ ಖಿನ್ನರಾಗಿ ಕುಳಿತಿದ್ದರು. ಆ ಸಮಯದಲ್ಲಿ ಮಾತಿಗೆಮಾತು ಹೊರಟು ನಾನು ನಿಜವಾಗಿಯೂ ಮರಾಟ

ನಿರುವೆನೆಂದು ಚಟಕ್ಕನೆ ನುಡಿದುಬಿಟ್ಟರು. ಆದರೆ ನಾನು ಈ ಪ್ರಕಾರ ಅವರ ಕೊರಳನ್ನು ಅಪ್ಪಿಕೊಂಡೊಡನೆಯೇ—ಈ ಸಮಯದಲ್ಲಿ ಬೇಗಮಳು ನಿಜವಾಗಿಯೂ ತನ್ನ ತಂದೆಯ ಕೊರಳನ್ನು ಎರಡೂ ಕೈಯ್ಗಳಿಂದ ಅಪ್ಪಿದಳು ಅವರು—"ನಾನು ಪ್ರಿಯರೋಷನಳ ಪತಿಯು; ಹಿಂದೂಗಳ ವೈರಿಯು !" ಎಂದು ಏನೇನೋ ಮಾತಾಡಿದರು. ನಿಜವಾಗಿಯೂ ನನ್ನ ಮೇಲೆ ಅವರ ಪ್ರೇಮವಿದೆ. ಆದರೆ ನಾನು ಅವರ ಹತ್ತಿರದಲ್ಲಿಲ್ಲದಿದ್ದರೆ ಅವರು ಯಾವ ಕಾಲಕ್ಕೆ ಸನ್ಯಾಸಿಗಳಾಗಿ ಓಡಿಹೋಗುವರೋ ಎಂಬ ಭಯವು ನನಗುಂಟಾಗಿದೆ. ನಾನಿಲ್ಲದಾಗ ಅವರು ಖಿನ್ನರಾಗಿ ಏಕಾಂತದಲ್ಲಿ ಏನನ್ನೋ ವಿಚಾರ ಮಾಡುತ, ಕುಳಿತುಕೊಂಡಿರುತ್ತಾರೆ. ಆದರೆ ನಾನು ಅವರ ಮೇಲೆ ದೃಷ್ಟಿಯನ್ನು ಕೆಡಹುವದೊಂದೇ ತಡ! ಅವರು ತತ್ಕ್ಷಣದಲ್ಲಿಯೇ ಮೋಹಿತರಾಗಿ ಹೋಗುತ್ತಾರೆ." ಹೀಗೆ ಮಾತನಾಡಿ ಬೇಗಮ್ಮಳು ಬಾದಶಹನನ್ನು ಕಡೆಗಣ್ಣಿನಿಂದ ನೋಡುತ್ತ ಆತನ ಗಡ್ಡವನ್ನು ಹಿಡಿದು ನಗಲಾರಂಭಿಸಿದಳು.

**ಅಫ್ ಜಲ್**:—ಇಂತಹ ವಿದ್ಯುತ್ಕಟಾಕ್ಷದಿಂದ ಹುಚ್ಚನಾಗದಿರುವ ಮನುಷ್ಯನು ವಶುವೆಂದೇ ಅನ್ನಬೇಕಾಗುವದು. ಜಹಾಂಪನಾಹ, ಬೇಗಮಳ ನುಡಿಯನ್ನು ಕೇಳಿದ ನಿಮಗೆ ನನ್ನ ಮಾತು ಎಷ್ಟರ ಮಟ್ಟಿಗೆ ನಿಜವಾಗಿದೆಯೆಂಬುದರ ಕಲ್ಪನೆಯು ಈಗ ಉಂಟಾಗಿರಬಹುದು. ಇಂತಹ ವಿಚಿತ್ರಮನೋವೃತ್ತಿಯ ಮನುಷ್ಯನನ್ನು ಸೇನಾಪತಿಯನ್ನಾಗಿ ಮಾಡಿ ಶಿವಾಜಿ ಭೋಸಲೆಯ ಪುಂಡತನವನ್ನು ಅಡಗಿಸುವುದಕ್ಕೆ ಆತನನ್ನು ಕಳುಹಿಸಲು ಸಿದ್ಧರಾಗಿರುವಿರಿ! ಪರಮ ಸುಂದರಿಯಾದ ರೋಷನಬೇಗಮಳ ತಂದೆಗಿಂತಲೂ ಮರಾಟ ಸರದಾರರನ್ನು ಯಾವನು ಹೆಚ್ಚಾಗಿ ಪ್ರೀತಿಸುತ್ತಾನೆಯೋ, ಜಗನ್ಮೋಹಿಸಿಯಾದ ರೋಷನಬೇಗಮಳ ಮೋಹಪಾಶದಲ್ಲಿದ್ದರೂ. ಯಾವನ ವೃತ್ತಿಯು ಹಿಂದೂ ಧರ್ಮದ ಕಡೆಗೆ ಇರುವುದೋ, ಯಾವನು ಅದಿಲಶಾಹಿಯ ಕೃಪೆಯಿಂದ ಪ್ರಾಪ್ತವಾದ ಅಪಾರವಾದ ವೈಭವವನ್ನು ತುಚ್ಛವೆಂದು ಭಾವಿಸಿ, ಮರಾಟರ ಸರದಾರತನವೇ ಹೆಚ್ಚಿನದೆಂದು ತಿಳಿಯುತ್ತಾನೆಯೋ ಅಂತಹನು ಶಿವಾಜಿಯ ಬಂಡಾಯವನ್ನು ಚೆನ್ನಾಗಿಯೇ ಮುರಿಯಬಹುದಲ್ಲವೆ? ತಾವು ಒಳ್ಳೆಯ ಮನುಷ್ಯನನ್ನು ಈ ಕೆಲಸಕ್ಕೆ ಆರಿಸಿದಿರಿ! ಶಿವಾಜಿ ಭೋಸಲೆಯು ಸಕ್ಕರೆಯಂತಹ ಸವಿಮಾತುಗಳನ್ನಾಡುವದರಲ್ಲಿ ಕುಶಲನಾಗಿದ್ದಾನೆಂದು ಕೇಳಿದ್ದೇನೆ. ಅವನು ಇಂತಹ ಅರ್ಧಪಂಡಿತನ ಮೇಲೆ ಹಾ ಹಾ ಅನ್ನುವದರೊಳಗಾಗಿ ತನ್ನ ವರ್ಚಸ್ಸನ್ನು ಪ್ರಸರಿಸಿ

ಇವನನ್ನೂ ತನ್ನ ಪಕ್ಷಕ್ಕೆ ಒಲಿಸಿಕೊಳ್ಳುವನು. ಅಳುಬುರುಕ ಮೋರೆಯನ್ನು ಮಾಡಿಕೊಂಡು ಬಜಾಜಿಯು ತಿರುಗಿ ಬಾರದಿದ್ದರೆ ನಮ್ಮೆಲ್ಲರ ಪುಣ್ಯವು! ಯಾಕಂದರೆ ಚಂಚಲಿತವಾದ ಆತನ ಮನಸ್ಸನ್ನು ತಕ್ಕದಾರಿಗೆ ತರಲು ಬೇಗಮಸಾಹೇಬರೂ ಅಲ್ಲಿ ಇರುವುದಿಲ್ಲ! ಜಹಾಂಪನಾಹ, ತಾವು ಈ ಕರ್ತವ್ಯವನ್ನು ಬಜಾಜಿಗೆ ಒಪ್ಪಿಸಿದ್ದು ಜಾಣತನದ ಕೆಲಸವಾಗಲಿಲ್ಲೆಂದು ನನಗಂತೂ ತೋರುತ್ತದೆ."

ಇಷ್ಟು ಮಾತನಾಡಿ ಅಫ್‌ಜಲ್‌ಖಾನನು ಸ್ತಬ್ಧನಾದನು.; ನಿಟ್ಟುಸಿರುಗಳನ್ನು ಬಿಡುತ್ತ ಬೇಗಮಳ ಕಡೆಗೆ ನೋಡಹತ್ತಿದನು. ತನ್ನ ಮಾತಿನ ಪರಿಣಾಮವು ಬೇಗಮಳ ಮನಸ್ಸಿನ ಮೇಲೆ ಉಂಟಾಗಬೇಕೆಂಬುದು ಆತನ ಉದ್ದೇಶವಾಗಿತ್ತು-ಆ ಉದ್ದೇಶವು ಸಫಲವೂ ಆಯಿತು.

ಯಾಕಂದರೆ ಮೇಲಿನ ಮಾತುಗಳನ್ನು ಕೇಳಿದೊಡನೆಯೇ ರೋಷನಳ ಮನಸ್ಸು ಚಂಚಲವಾಯಿತು. ಅವಳು ಬಾದಶಹನ ಕಡೆಗೆ ಮೊಗದಿರುವಿ ಮಾತನಾಡಿದಳು:— "ಅಪ್ಪಾ, ಅಣ್ಣನು ಹೇಳಿದುದು ನಿಜವೇನು? ನವಾಬಸಾಹೇಬರು ನಿಜವಾಗಿಯೂ ಯುದ್ಧಕ್ಕೆ ಹೊರಡುವರೋ! ಶಿವಾಜಿ ಭೋಸಲೆಯ ಬಂಡಾಯವನ್ನು ಮುರಿಯುವದಕ್ಕೆ ನಿಜವಾಗಿಯೂ ನೀವು ಅವರನ್ನು ನಿಯಮಿಸಿರುವಿರಾ?"

ಬಾದಶಹನ ಮನಸ್ಸೂ ಚಂಚಲವಾಯಿತು. ನಿಜವಾಗಿಯೂ ನಾನು ತಪ್ಪನ್ನು ಮಾಡಿದೆನೋ ಏನೋ ಎಂದು ಆತನು ಚಿಂತಿಸಹತ್ತಿದನು. ಆ ಮೇಲೆ ಆತನು— "ರೋಷನ್ ಬಜಾಜಿಗೆ ಈ ಕೆಲಸವನ್ನು ಒಪ್ಪಿಸಿದ್ದು ನಿಜ ! ಯಾಕೆ ? ಅದರಲ್ಲಿ ನಿನಗೇಕೆ ಇಷ್ಟು ಸಂದೇಹವು ?"

ರೋಷನಳು ನಿರಾಶೆಯಿಂದ ಮಾತನಾಡಿದಳು: —" ಸಂದೇಹವೇ! ನನ್ನ ಹಣೆಬರಹವೆ ಹಾಗಿದೆಯೆನ್ನಬೇಕಾಗುವದು. ಇತ್ತಿತ್ತಲಾಗಿ ಆತ್ಮವಿಶ್ವಾಸವೇ ನನ್ನಲ್ಲಿ ಇಲ್ಲದಾಗಿದೆ. ಮೊದಮೊದಲು ನನ್ನ ಸೌಂದರ್ಯದ ಅಭಿಮಾನವು ನನಗಿತ್ತು ; ಈಗಾದರೂ ಇದೆ. ನನ್ನ ಸೌಂದರ್ಯದ ಶಕ್ತಿಯಿಂದ ಅವರ ಮನಸ್ಸನ್ನು ಬೇಕಾದತ್ತ ಒಲಿಸುವೆನೆಂಬ ಧೈರ್ಯವು ನನಗಿತ್ತು. ಆದರೆ ಇತ್ತಿತ್ತಲಾಗಿ ಅವರ ಮನಸ್ಸಿನ ಸ್ಥಿತಿಯು ಬಹಳ ವಿಲಕ್ಷಣವಾಗಿರುತ್ತದೆ. ಮದನನ ಬತ್ತಳಿಕೆಯೊಳಗಿನ ಬಾಣಗಳನ್ನೆಲ್ಲ ವೆಚ್ಚ ಮಾಡಿದರೂ, ಜಯಸಿಕ್ಕುವುದು ಒಮ್ಮೊಮ್ಮೆ ಅಪರೂಪವಾಗುತ್ತದೆ. ಆದುದರಿಂದ ಇಂತಹ ಸ್ಥಿತಿಯಲ್ಲಿ ಶಿವಾಜಿಯು ಕೈಯಲ್ಲಿ ಸಿಕ್ಕರೆ ನಿಜವಾಗಿಯೂ ಅವರು ಹಿಂದೂಮತದೀಕ್ಷೆಯನ್ನು ಮತ್ತೆ ಪಡೆದು

ಅಲ್ಲಿಯೇ ಇರುವರು. ಆ ಮೇಲೆ ರೋಷನಳನ್ನು ಕೇಳುವವರಾರು ? ಅಯ್ಯೋ, ಅಲ್ಲಾ " ,, ರೋಷನಳು ಹಣೆಯಮೇಲೆ ಕೈಯನ್ನಿಟ್ಟು ಕಣ್ಣೀರುಗಳನ್ನು ಸುರಿಸ ಹತ್ತಿದಳು.

ಅಫ್‌ಝುಲ್‌ಖಾನನು ರೋಷನಳಿಗೆ ಸಮಾಧಾನವಾಗುವಂತೆ ಮಾತನಾಡಿದನು:—" ಬೇಗಮುಸಾಹೇಬ, ತಾವು ವ್ಯಸನಪಡಬೇಕಾದ ಕಾರಣವಿಲ್ಲ. ಆ ಕಾಫರರ ಧರ್ಮವು ನಮ್ಮ ಧರ್ಮದಂತೆ ಉದಾರವಾಗಿಲ್ಲ. ಯಾವನೊಬ್ಬ ಮನುಷ್ಯನು ಕೇವಲ ಅಜ್ಞಾನದಿಂದಲೇ ಯಾಕಾಗಲೊಲ್ಲದು, ಅವರ ಧರ್ಮದಿಂದ ಒಮ್ಮೆ ಚ್ಯುತನಾದನೆಂದರೆ ತಿರುಗಿ ಆತನನ್ನು ಅವರು ತಮ್ಮ ಧರ್ಮದಲ್ಲಿ ತೆಗೆದುಕೊಳ್ಳುವದೇ ಇಲ್ಲ. ಆದದರಿಂದ ಬಜಾಜೀಖಾನರು ಹಿಂದೂತ್ವವನ್ನು ಸ್ವೀಕಾರ ಮಾಡಿ ಅಲ್ಲಿಯೇ ಇರುವರೆಂಬ ಭೀತಿಯು ವ್ಯರ್ಥವಾದುದು. ಅವರು ಹಿಂದುವಾಗಲಾರರೆಂಬುದಿಷ್ಟೇ ಅಲ್ಲ; ಅವರ ನೆರಳನ್ನು ಕೂಡ ಹಿಂದುಗಳು ತಮ್ಮ ಮೇಲೆ ಬೀಳಗೊಡುವದಿಲ್ಲ. ಆದರೆ ಶಿವಾಜಿಯನ್ನು ನಾಶಮಾಡದೆ ಕಯ್ಸುರಿಸಿಕೊಳ್ಳುತ್ತ ಮರಳಿ ಬಂದು, ಮೊದಲೇ ಬಡತನಕ್ಕೆ ಈಡಾಗಿರುವ ಆದಿಲಶಾಹಿಯ ಮೇಲೆ ಸೈನ್ಯದ ವೆಚ್ಚದ ಭಾರವನ್ನೆಷ್ಟು ಹೆಚ್ಚಾಗಿ ಹಾಕುವರೋ ಏನೋ ಎಂಬ ಭೀತಿಯು ಮಾತ್ರ ನನಗುಂಟಾಗಿದೆ! ಆದುದರಿಂದ ಬಾದಶಹರಿಗೆ ನಾನು ವಿನಯಪೂರ್ವಕವಾಗಿ ಹೇಳಿಕೊಳ್ಳುವುದೇನೆಂದರೆ—ಬಜಾಜೀಖಾನರನ್ನು ದಯಮಾಡಿ ಈ ಕೆಲಸಕ್ಕೆ ಕಳಿಸಬಾರದು."

**ರೋಷನ**:—ಅಪ್ಪಾ, ನಾನಾದರೂ ನಿಮಗೆ ಇಷ್ಟೇ ಬೇಡಿಕೊಳ್ಳುತ್ತೇನೆ. ನಿಮ್ಮ ಪ್ರೀತಿಯ ಮಗಳಾದ ರೋಷನಳ ಸೌಖ್ಯದಲ್ಲಿ ವಿಷವನ್ನು ಕೂಡಿಸುವ ಪಾಪವನ್ನು ನೀವು ಮಾಡಲಿಕ್ಕಿಲ್ಲೆಂದು ನಂಬಿದ್ದೇನೆ !

ಈ ಪ್ರಕಾರ ರೋಷನಳು ಅಫ್‌ಝುಲ್‌ಖಾನನ ಮಾತಿಗೆ ಪೋಷಕವಾಗಿ ಮಾತನಾಡಿದಳು. ಆಗ ಬಾದಶಹನು ಖಿನ್ನಸ್ವರದಿಂದ ಮಾತನಾಡಿದನು-

**ಬಾದಶಹ**:—ಮಗಳೇ, ಈಗ ನಿನ್ನ ವಿನತಿಯನ್ನು ಮನ್ನಿಸುವದಕ್ಕಾಗುವದಿಲ್ಲ. ಯಾಕಂದರೆ ತುಂಬಿದ ಸಭೆಯಲ್ಲಿ ಎಲ್ಲರ ಸಮಕ್ಷವಾಗಿ ನಾನು ಈ ಕೆಲಸವನ್ನು ಬಜಾಜೀಖಾನನಿಗೆ ಒಪ್ಪಿಸಿದೆನು; ಆತನಾದರೂ ಒಳ್ಳೆಯ ಆನಂದದಿಂದ ಅದಕ್ಕೆ ಸಮ್ಮತಿಸಿದ್ದಾನೆ. ಬಹುದಿವಸಗಳಿಂದಲೂ ಈ ಕೆಲಸವನ್ನು ಮಾಡಬೇಕೆಂದು ಆತನ ಮನಸ್ಸಿನಲ್ಲಿತ್ತು. ಈಗ ನಾನು ಆತನಿಗೆ ಬೇಡವೆಂದು ಹೇಳಿದರೆ, ಅವನು ನನ್ನ ವಿಷಯವಾಗಿ ವಿಕಲ್ಪವನ್ನು ತಿಳಿಯದೆ ಇರಲಾರನು; ಮತ್ತು ಇದರಿಂದ ದರಬಾರದಲ್ಲಿ ನಿಜವಾಗಿಯೂ ದ್ವೈಧೀಭಾವವು ಉತ್ಪನ್ನವಾಗುವುದು. ಆ ಮೇಲೆ ಸುಸ್ಥಿತಿಯನ್ನು ಕಾಯ್ದುಕೊಳ್ಳುವುದಕ್ಕೆ ಬಹಳ

ಕಷ್ಟವಾಗುವುದು. ಆದರೂ ನಾನು ಇದಕ್ಕೆ ಯಾವದಾದರೊಂದು ಉಪಾಯ ವನ್ನು ಮಾಡಿಯೇ ಮಾಡುವೆನು. ನೀವು ಇಬ್ಬರೂ ಹೇಳಿದ ಸಂಗತಿಯು ಬಹು ಮಟ್ಟಿಗೆ ನಿಜವಾಗಿದ್ದಂತೆ ತೋರುತ್ತದೆ. ಆತನು ಈ ಯುದ್ಧಕ್ಕೆ ಸೇನಾಪತಿ ಯೆಂದು ನಿಯಮಿಸಲ್ಪಟ್ಟಿರುವ್ರದರಿಂದ ಅವನನ್ನು ಆ ಕೆಲಸದಿಂದ ದೂರ ಮಾಡ ಲಿಕ್ಕೆ ಬರುವಂತಿಲ್ಲ. ಅದರೆ ಅವನಿಂದ ಅದಿಲಶಾಹಿಗೆ ಯಾವ ತರದ ಹಾನಿಯೂ ಉಂಟಾಗದಂತೆ ವ್ಯವಸ್ಥೆಯನ್ನು ಮಾಡದೆ ಬಿಡುವುದಿಲ್ಲ. ಮಗಳೇ, ನೀನು ವ್ಯರ್ಥ ವಾಗಿ ಚಿಂತೆಯನ್ನೇಕೆ ಮಾಡುತ್ತೀ ? ಬಜಾಜೀಖಾನನು ಆ ಕಾಫರರ ಧರ್ಮ ದಲ್ಲಿ ಮರಳಿ ಸೇರಲಿಕ್ಕೆ ಬರುವುದೇ ಇಲ್ಲ. ಯಾವನೊಬ್ಬನನ್ನು ನಾವು ಬಲಾತ್ಕಾ ರದಿಂದ ಮುಸಲ್ಮಾನನನ್ನು ಮಾಡಿಬಿಟ್ಟರೂ, ಅವನು ಮುಸಲ್ಮಾನನೇ ಆಗುತ್ತಾ ನೆಯೇ ಹೊರತು ಹಿಂದುವಾಗಲಾರನು! ನಿನ್ನ ಗಂಡನಾದರೋ ಸ್ವಸಂತೋಷ ದಿಂದಲೂ ಐಶ್ವರ್ಯದ ಲೋಭದಿಂದಲೂ ಮುಸಲ್ಮಾನನಾಗಿದ್ದಾನೆ; ಮೇಲಾಗಿ ಇಷ್ಟು ದಿವಸಗಳ ವರೆಗೆ ಮುಸಲ್ಮಾನನಾಗಿಯೇ ಇದ್ದಾನೆ. ಅಂದಮೇಲೆ ಆತನು ಮತ್ತೆ ಹಿಂದುವಾಗುವುದು ಹೇಗೆ ?

**ರೋಷನ** :—ಅಪ್ಪಾ, ನೀವು ಎಷ್ಟು ಸಮಾಧಾನವನ್ನು ಹೇಳಿದರೂ ನನ್ನ ಮನಸ್ಸು ಶಾಂತವಾಗಲೊಲ್ಲದು; ಅವರು ಭೋಸಲೆಯ ಸಂಗಡ ಕಾದಾಡು ವದಕ್ಕೆ ಹೊರಡುವರೆಂಬ ವರ್ತಮಾನವನ್ನು ಕೇಳಿದಾಗಿನಿಂದ ನನ್ನ ಮನಸ್ಸಿಗೆ ಸಮಾಧಾನವೇ ಇಲ್ಲವಾಗಿದೆ. ನನ್ನ ಸುಖವು ಇನ್ನು ಮುಂದೆ ಮಣ್ಣು ಪಾಲಾ ಗುವುದೋ ಏನೋ ಎಂಬ ಭೀತಿಯು ನನ್ನಲ್ಲಿ ಉತ್ಪನ್ನವಾಗಿದೆ. ಯಾಕಂದರೆ ಅವರ ಸ್ಥಿತಿಯೇ ಅಷ್ಟೊಂದು ವಿಲಕ್ಷಣವಾಗಿದೆ! ಅವರು ತಿರುಗಿ ಹಿಂದುವಾಗ ಲಿಕ್ಕೆಬಾರದಿದ್ದರೂ, ಸನ್ಯಾಸಿಗಳಾಗಿ ಎಲ್ಲಿ ಓಡಿಹೋಗುವರೋ ಎಂಬ ಅಂಜಿಕೆಯು ನನ್ನಲ್ಲಿ ಹುಟ್ಟಿದೆ! ಆದುದರಿಂದ ಅಪ್ಪಾ, ನಾನೂ ಅವರ ಸಂಗಡಲೇ ಹೊರಡು ವೆನು ! ನಾನು ಹತ್ತರದಲ್ಲಿದ್ದರೆ, ಅವರ ಮನಸ್ಸು ಅಷ್ಟೊಂದು ಚಂಚಲವಾಗ ಗೊಡುವದಿಲ್ಲ. ಅನೇಕವಿಧದಿಂದ ಪ್ರಯತ್ನಮಾಡಿ ಅವರನ್ನು ನನ್ನಲ್ಲಿ ಅನುರಕ್ತ ರನ್ನಾಗಿ ಮಾಡಿಕೊಳ್ಳುವೆನು. ಅಪ್ಪಾ, ನಾನು ಅವರ ಸಂಗಡ ಹೋಗಿಯೇ ಹೋಗುವೆನು.

ರೋಷನ ಬೇಗಮಳ ಈ ಹಂಚಿಕೆಯು ಅಫ್‌ಝುಲ್‌ಖಾನನ ಮನಸ್ಸಿಗೆ ಬಂತು. ಆನಂದದ ಭರದಲ್ಲಿ 'ಬಹೋತ ಹೀ ಅಚ್ಛಾ!' ಎಂಬ ಮಾತುಗಳು ಅವನ ಬಾಯಿಂದ ಹೊರಬಿದ್ದವು. ಬಾದಶಹನಿಗೂ ಈ ಯುಕ್ತಿಯು ಸಮಂಜಸವೆನಿ ಸಿತು. ಆತನು ಅಫ್‌ಝುಲ್‌ಖಾನನನ್ನು ಕುರಿತು ಪ್ರಶ್ನೆಮಾಡಿದನು. "ಯುದ್ಧ ವೆಂಬುದು ಹೆಂಗಸರ ವಿಷಯವಲ್ಲ ; ಆದುದರಿಂದ ರೋಷನಳು ಬಜಾಜಿಯ ಸಂಗಡ ಹೋದರೆ ಅವಳ ಮೇಲೆ ಏನಾದರೂ ಸಂಕಟವು ಬರಲಿಕ್ಕಿಲ್ಲವಷ್ಟೇ ? "

ಅಫ್‌ಝುಲ್‌ಖಾನನು ತಿರಸ್ಕಾರದಿಂದ ನಕ್ಕು ಇಂತು ನುಡಿದನು:—ವಿಜಾಪುರದ ಪರಾಕ್ರಮಶಾಲಿಯಾದ ಸೈನ್ಯವು ದಿಲ್ಲಿಯ ಬಾದಶಹನೊಡನೆ ಯುದ್ಧಮಾಡಬಲ್ಲುದು. ಅಂದಮೇಲೆ ಈ ಗುಡ್ಡದೊಳಗಿನ ಇಲಿಗಳನ್ನು ಬೆನ್ನಟ್ಟುವುದಕ್ಕೆ ಭಯವೇನು? ಇದಕ್ಕೆ ಯುದ್ಧವೆಂದಾದರೂ ಯಾರು ಅನ್ನುವರು? ವಿಜಾಪುರದ ಪ್ರಚಂಡವಾದ ಸೈನ್ಯವು ಸಂರಕ್ಷಕವಾಗಿರಲು, ಆಗುಡ್ಡದ ಇಲಿಗಳು ರೋಷನ ಬೇಗಮಳ ದರ್ಶನವನ್ನು ಮಾಡಲಾದರೂ ಸಮರ್ಥವಾಗಲಾರವು. ತಾವು ನಿರ್ಭಯದಿಂದ ರೋಷನಳನ್ನು ಕಳಿಸಿಬಿಡಿರಿ. ಬಜಾಜೀಖಾನರ ಕಡಿವಾಣವು ಬೇಗಮಳ ಕಯ್ಯಲ್ಲಿದ್ದರೆ, ಅವರಿಂದ ವಿಜಾಪುರಕ್ಕೆ ಯಾವ ತರದ ಹಾನಿಯೂ ತಟ್ಟದು!"

ಈ ಪ್ರಕಾರದ ಮಾತುಕತೆಗಳಾದ ಬಳಿಕ ರೋಷನಳು ಬಜಾಜಿಯ ಸಂಗಡ ಹೊರಡುವುದಕ್ಕೆ ಬಾದಶಹನಿಂದ ಅಪ್ಪಣೆಯನ್ನು ಪಡೆದಳು. ಅನಂತರ ಅವಳು ಅಂತಃಪುರದ ಕಡೆಗೆ ತೆರಳಿದಳು; ಯಾಕಂದರೆ ಮುಂದೆ ನಡೆಯುವ ಯುದ್ಧಕ್ಕೆ ಹೊರಡುವ ಮೊದಲು ಮದನಬಾಣಗಳ ನೆರವಿನಿಂದ ಮನೆಯಲ್ಲಿಯೇ ಆಕೆಯು ಯುದ್ಧವನ್ನು ಮಾಡಬೇಕಾಗಿತ್ತು. ಬಾದಶಹನೂ ಅಫ್‌ಝುಲ್‌ಖಾನನೂ ಬಹುಕಾಲದವರೆಗೆ ಆಲೋಚನೆಮಾಡುತ್ತ ಕುಳಿತುಕೊಂಡಿದ್ದರು. ಬಜಾಜೀಖಾನನಿಗೆ ತಿಳಿಯಗೊಡದಂತೆಯೇ ಆತನನ್ನು ಹಾದಿಗೆ ತರುವುದಕ್ಕೆ ಯಾವ ಉಪಾಯಗಳನ್ನು ಮಾಡಬೇಕೆಂಬುದಾಗಿ ಅವರು ಬಹಳ ಹೊತ್ತಿನ ವರೆಗೆ ಏಕಾಂತವಾಗಿ ಆಲೋಚಿಸಿದರು. ಕೊನೆಗೆ ಅವರಿಬ್ಬರೂ ಕೂಡಿ ಏನೆಂದು ನಿಶ್ಚಯಮಾಡಿದರೆಂಬುದು ಮುಂದಿನ ಪ್ರಕರಣದಲ್ಲಿ ವಿದಿತವಾಗುವುದು.



## ಐದನೆಯ ಪ್ರಕರಣ



### ಅಭಿಯೋಗ!



ಶ್ರೀವಾಜಿಯು ಬಂಡಾಯವನ್ನು ಮುರಿಯುವೆನೆಂದು ಪ್ರತಿಜ್ಞೆ ಮಾಡಿದಂದಿನಿಂದ ಬಜಾಜೀಖಾನನ ಚಿತ್ತವೃತ್ತಿಯು ಬದಲಾಯಿತು. ಮೊಗದ ಮೇಲಿನ ಖಿನ್ನತೆಯು ಇಲ್ಲದಂತಾಗಿ ಉತ್ಸಾಹವು ಅದರ ಸ್ಥಳವನ್ನಾಕ್ರಮಿಸಿತು. ರೋಷನ ಬೀಬಿಯು ಪ್ರೇಮಸಂಬಂಧದಿಂದ ಕುಲಮರ್ಯಾದೆ

ಯನ್ನು ಬೆಳೆಯಿಸುವಂತಹ ಸತ್ಪುತ್ರನು ತನಗೆ ಜನಿಸಲಿಲ್ಲವೆಂಬ ವಿಚಾರವನ್ನು ಆತನು ಮರೆತುಬಿಟ್ಟನು. ಶಿವಾಜಿಯ ಸಮ್ಮರ್ದನ, ಆತನ ಬಂಡಾಯದ ಖಂಡನೆ, ಆದಿಲಶಾಹಿಯ ಸಂರಕ್ಷಣ ಇವುಗಳ ಹೊರತು ಅನ್ಯವಿಚಾರಗಳು ಆತನ ಮನಸ್ಸಿನಲ್ಲಿ ಬಾರದಾದುವು. ಶಿವಾಜಿಯ ಮೇಲೆ ಯಾವ ಕಡೆಯಿಂದ ದಂಡೆತ್ತಿ ಹೋಗಬೇಕು ? ಅವನನ್ನು ಎಂತಹ ಬಿಕ್ಕಟ್ಟಿನ ಸ್ಥಿತಿಯಲ್ಲಿ ತರಬೇಕು? ಅವನನ್ನು ಹೇಗೆ ಜಯಿಸಬೇಕು ? ಆತನು ಕಯ್ಯಲ್ಲಿ ಸಿಕ್ಕಾಗ ವಿಜಾಪುರಕ್ಕೆ ಅವನನ್ನು ಹೇಗೆ ತರಬೇಕು ? ಇವೇ ವಿಚಾರಗಳಲ್ಲಿಯೇ ಆತನು ಮುಳುಗಿಹೋಗಿದ್ದನು. ಭಾವಿಯುದ್ಧದ ಕಾಲ್ಪನಿಕಚಿತ್ರಗಳನ್ನು ಚಿತ್ರಿಸುವುದರಲ್ಲಿ ಆತನು ಮಗ್ನನಾಗಿದ್ದನು. ಭಾವಿಪರಾಕ್ರಮದ ಕಲ್ಪನಾಚಿತ್ರದಿಂದ ಆತನು ಮೋಹಿತನಾಗಿ ಹೋಗಿದ್ದನು.

ಆತನು ಯುದ್ಧದ ಸಿದ್ಧತೆಯನ್ನು ಚೆನ್ನಾಗಿ ಮಾಡಿದನು. ತೋಪುಗಳ ಸಮೂಹವೂ, ಅಶ್ವಸೈನ್ಯವೂ, ಶಸ್ತ್ರಪಾಣಿಗಳೂ ಸನ್ನದ್ಧರಾದರು. ಬಜಾಜಿಯು ದೊಡ್ಡ ಸರದಾರನಾದುದರಿಂದ ಶಿವಾಜಿಯ ಔದ್ಧತ್ಯವನ್ನು ಮುರಿಯುವುದಕ್ಕೆ ಸಾಕಷ್ಟು ಸೈನ್ಯವು ಆತನ ಬಳಿಯಲ್ಲಿತ್ತು. ಮೇಲಾಗಿ ಕೆಲವು ಮರಾಟ ಸರದಾರರೂ, ಮುಸಲ್ಮಾನ ಸರದಾರರೂ ಸಸೈನ್ಯರಾಗಿ ಬಂದು ಅವನನ್ನು ಕೂಡಿದ್ದರು. ಶಿವಾಜಿಯ ಬಂಡಾಯವನ್ನು ಅಡಗಿಸಿದ ಕೀರ್ತಿಗೆ ತಾವೂ ಭಾಜನರಾಗಬೇಕೆಂಬ ಉದ್ದೇಶದಿಂದಲೇ ಅವರು ಬಜಾಜಿಯ ಸೈನ್ಯದಲ್ಲಿ ಸಮ್ಮಿಲಿತರಾಗಿದ್ದರು. ಬಜಾಜೀಖಾನನಿಗೂ ಇದು ಇಷ್ಟವಾಗಿಯೇ ಇತ್ತು. ಏಕೆಂದರೆ ತನ್ನ ಬಲವು ಅಧಿಕವಾಗಿದ್ದಷ್ಟೂ ಶೀಘ್ರವಾಗಿ ತನ್ನ ಕಾರ್ಯವು ನೆರವೇರುವುದೆಂದು ಆತನು ನಂಬಿದ್ದನು. ಆದುದರಿಂದ ಯುದ್ಧಸನ್ನದ್ಧರಾಗಿ ತನ್ನ ಕಡೆಗೆ ಬಂದ ಆ ಸರದಾರರನ್ನು ಅವನು ಸ್ವಾಗತಪೂರ್ವಕವಾಗಿ ಬರಮಾಡಿಕೊಂಡನು.

ಯುದ್ಧಕ್ಕೆ ಹೊರಡುವ ದಿವಸವು ಸಮೀಪಿಸಿತು. ಆದರೆ ಮಧ್ಯದಲ್ಲಿಯೇ ಒಂದು ವಿಘ್ನವು ಉಪಸ್ಥಿತವಾಯಿತು. ನಾನೂ ತಮ್ಮ ಸಂಗಡ ಬರುವೆನೆಂದು ರೋಷನ ಬೇಗಮಳು ಹಟವನ್ನು ಹಿಡಿದಳು. ಬಜಾಜೀಖಾನನು ಅವಳ ಮನಸ್ಸನ್ನು ತಿರುಗಿಸುವ ಉದ್ದೇಶದಿಂದ ಅವಳಿಗೆ ಹೀಗೆ ಹೇಳಿದನು:— “ನಾನು ಹೋಗಬೇಕಾಗಿರುವ ಪ್ರದೇಶವು, ಸ್ತ್ರೀಯರು ನೋಡುವಂತೆ ಸುಂದರವಾಗಿಲ್ಲ. ಗುಡ್ಡದೊಳಗಿಂದಲೂ, ಹಳವು ( ಕುರುಚು ಕಾಡು ) ಗಳೊಳಗಿಂದಲೂ, ತಗ್ಗುದಿನ್ನೆಗಳೊಳಗಿಂದಲೂ ಹಾಯ್ದು ಹೋಗಬೇಕಾಗುವುದು. ಶಿವಾಜಿಯು ಸಹಜ

ವಾಗಿ ಕಯ್ಸೋರತಕ್ಕವನಲ್ಲ. ಅನೇಕಪ್ರಕಾರದ ಪ್ರತಿಕೂಲಪರಿಸ್ಥಿತಿಯಲ್ಲಿ ಆತ ನನ್ನು ಬಿನ್ನಟ್ಟಬೇಕಾಗುವದು. ಅನೇಕದುರ್ಗಗಳನ್ನು ಹತ್ತಬೇಕಾಗುವುದು. ಎಷ್ಟೋ ಸಾರೆ ಕಾಲಿಂದಲೇ ನಡೆಯಬೇಕಾಗುವುದು. ಈ ಪ್ರಕಾರದಿಂದ ಕಷ್ಟ ಕರವಾದ ಸ್ಥಿತಿಯಲ್ಲಿ ನನ್ನೊಡನೆ ಬಂದು, ಸೌಖ್ಯದಿಂದಿದ್ದ ನೀನು ದುಃಖದಲ್ಲಿ ಏಕೆ ಬೀಳುವೆ ? ”

ಹೀಗೆ ಬಜಾಜಿಯು ರೋಷನ ಬೇಗಮಳಿಗೆ ಬೇಕಾದಷ್ಟು ಉಪದೇಶ ಮಾಡಿದನು- ಅದರೆ ಎಲ್ಲವೂ ವ್ಯರ್ಥವಾಯಿತು. ತನ್ನ ಸಂಗಡ ಬರಬೇಡ ವೆಂದು ತಿಳಿಸಿ ಹೇಳಲು ಹೆಚ್ಚು ಹೆಚ್ಚಾಗಿ ಬಜಾಜೀಖಾನನು ಪ್ರಯತ್ನ ಮಾಡಿ ದಂತೆ, ಬೇಗಮಳ ಕಣ್ಣೊಳಗಿನ ಗಂಗಾಯಮುನೆಗಳ ಪ್ರವಾಹಕ್ಕೆ ಹೆಚ್ಚು ಹೆಚ್ಚಾಗಿ ಮಹಾಪೂರವು ಬರಹತ್ತಿತು. ಬಜಾಜೀಖಾನನು ಏನು ಹೇಳಿದರೂ “ನೀವು ನಿಜವಾಗಿ ನನ್ನನ್ನು ಪ್ರೀತಿಸುವುದಿಲ್ಲ. ನಿಮ್ಮ ನಿಜವಾದ ಪ್ರೇಮವು ನನ್ನ ಮೇಲೆ ಇದ್ದರೆ, ಹೀಗೆಂದಿಗೂ ನೀವುನನ್ನನ್ನು ನಿರಾಶೆಗೆ ಒಳಗಾಗಗೊಡುತ್ತಿದ್ದಿಲ್ಲ.” ಎಂಬ ನಿಯಮಿತವಾದ ಉತ್ತರವನ್ನು ಕೊಡುತ್ತ ಅಳಲಾರಂಭಿಸಿದಳು. ಮತ್ತು ‘ನಾನೂ ನಿಮ್ಮ ಸಂಗಡ ಬರುವೆನು.’ ಎಂಬ ಪಲ್ಲವಿಯನ್ನು ಎಡೆಬಿಡದೆ ಹೇಳುತ್ತಿದ್ದಳು.

ರೋಷನ ಬೇಗಮಳ ಈ ಹಟವನ್ನು ನೋಡಿ ಬಜಾಜೀಖಾನನಿಗೆ ಆಶ್ಚರ್ಯ ವಾಯಿತು ! ಹೆಂಗಸರ ಹಟವನ್ನು ಪೂರಯಿಸುವದು ಕಠಿಣವೆಂಬುದನ್ನು ಆತನು ತಿಳಿದಿದ್ದನು. ಆದರೂ ಮನೆಯೊಳಗಿನ ಯಜಮಾನನ ಮಹತ್ವಾಕಾಂಕ್ಷೆಯನ್ನು ಮಣ್ಣುಪಾಲು ಮಾಡಲು ಹೆಂಗಸರು ಸಿದ್ಧರಾಗುವರೆಂಬುದು ಆತನಿಗೆ ಗೊತ್ತಿರ ಲಿಲ್ಲ. ರೋಷನ ಬೇಗಮಳನ್ನು ಸಂರಕ್ಷಿಸಲಿಕ್ಕೆ ಆತನು ಅಸಮರ್ಥನಾಗಿದ್ದ ನೆಂಬಂತೇನೂ ಇಲ್ಲ. ಆತನು ಕಯ್ಯಲ್ಲಿ ಬಳೆಗಳನ್ನು ಇಟ್ಟರದೆ ಖಡ್ಗವನ್ನು ಹಿಡಿದ ವೀರಪುರುಷನೇ ಅಗಿದ್ದನು. ಆದರೆ ಈ ಯುದ್ಧವು ಒಂದು ವಿಶಿಷ್ಟ ಪ್ರಕಾರದ್ದಾಗಿದ್ದುದರಿಂದ, ತನ್ನ ಸಂಗಡ ಸ್ತ್ರೀಯರನ್ನು ಕಟ್ಟಿಕೊಂಡು ಹೋಗು ವದು ಅನುಚಿತವೆಂದು ಆತನು ತಿಳಿದಿದ್ದನು. ಔರಂಗಜೇಬನ ಮೇಲೆ ದಂಡೆತ್ತಿ ಹೋಗಬೇಕಾಗಿದ್ದರೆ ರೋಷನಳನ್ನು ಸಂಗಡ ಕರೆದುಕೊಳ್ಳಲು ಆತನು ಎಂದೂ ಹಿಂದೆ ಮುಂದ ನೋಡುತ್ತಿದ್ದಿಲ್ಲ. ಯಾಕಂದರೆ ಆ ಯುದ್ಧದಲ್ಲಿ ಯಾವನು ಶೂರನೋ ಆತನಿಗೆ ಜಯವು ಸಿಕ್ಕುತ್ತಿತ್ತು; ಬಜಾಜೀಖಾನನಿಗಾದರೂ ತನ್ನ ಶೌರ್ಯದ ವಿಷಯವಾಗಿ ಚೆನ್ನಾಗಿ ನಂಬಿಗೆಯಿತ್ತು. ಆದರೆ ಈಗ ಅವನು ಮರಾಟರ ವಿರು ದ್ಧವಾಗಿ ಯುದ್ಧಮಾಡಬೇಕಾಗಿತ್ತು. ಮರಾಟರು ಯುದ್ಧರಂಗದಲ್ಲಿ ಎದುರು

ನಿಂತು ಯುದ್ಧ ಮಾಡುವ ಸ್ವಭಾವದವರಲ್ಲವೆಂಬುದು ಆತನಿಗೆ ಗೊತ್ತಿತ್ತು. ಗಿರಿ ಕಂದರಗಳೊಳಗಿಂದಲೂ ಗುಡ್ಡ ಹಳುವುಗಳೊಳಗಿಂದಲೂ ಅಕಸ್ಮಾತ್ತಾಗಿ ಓಡಿ ಬಂದು, ವಿಜಾಪುರದ ಸೈನ್ಯವನ್ನು ಹಣ್ಣು ಮಾಡುವ ಪ್ರಯತ್ನವನ್ನು ಮರಾಟರು ಮಾಡುವರೆಂಬದನ್ನು ಆತನು ಚೆನ್ನಾಗಿ ತಿಳಿದಿದ್ದನು. ಆದುದರಿಂದ ಸ್ತ್ರೀಸಮೂಹ ವನ್ನು ಸಂಗಡ ಕರೆದುಕೊಂಡು ಹೋಗುವದು ಅವನಿಗೆ ಇಷ್ಟವಾಗಿದ್ದಿಲ್ಲ. ಆತನು ಈಗ ಯುದ್ಧಮಾಡಬೇಕಾಗಿದ್ದಿಲ್ಲ; ಬಂಡುಗಾರರಿಗೆ ಯೋಗ್ಯಶಾಸನವನ್ನು ಮಾಡುವುದಕ್ಕಾಗಿ ಅವರನ್ನು ಬೆನ್ನಟ್ಟಿ ಹೋಗಬೇಕಾಗಿತ್ತು. ಆದುದರಿಂದ ಈಸಾರೆ ತನ್ನ ಸಂಗಡ ಬಂದೇ ಬರುವೆನೆಂದು ಹಟವನ್ನು ಹಿಡಿಯಬೇಡವೆಂದು ರೋಷನಳಿಗೆ ಆತನು ಪರಿಪರಿಯಿಂದ ಹೇಳಿದನು. ಆದರೂ ವ್ಯರ್ಥವೇ !! ರೋಷನಬೇಗಮಳು ಬಜಾಜಿಗೆ ಮೂಗಿಗಿಂತ ದೊಡ್ಡದಾದ ಮೂಗುತಿಯಂತಿದ್ದಳು. ಬಜಾಜೀಖಾನನು ಆ ಮೂಗುತಿಯ ಸೌಂದರ್ಯಕ್ಕೆ ಮೋಹಿಸಿ ಹೋಗಿದ್ದನಾದುದರಿಂದ, ಅದರ ಭಾರ ವು ಮತ್ತೂ ಹೆಚ್ಚಾಗಿತ್ತು. ಅವನು ಮೊದಲು ಅದನ್ನು ಅಲಂಕಾರವೆಂದು ಧಾರಣ ಮಾಡಿದನು; ಆದರೆ ಈಗ ಅದು ಅವನಿಗೆ ಪೀಡೆಯಾಗಿ ಪರಿಣಮಿಸಿತು. ರೋಷನಳ ಈ ಹಟವನ್ನು ಕಂಡು ಒಮ್ಮೆ ಅವಳ ವಿಷಯವಾಗಿ ತಿರಸ್ಕಾರವೂ ಅವನಲ್ಲಿ ಉತ್ಪನ್ನವಾಯಿತು. ಆದರೂ ಅದನ್ನು ವ್ಯಕ್ತವಾಗಿ ತೋರಿಸಲು ಆತನಿಗೆ ಧೈರ್ಯವಿಲ್ಲದೆ ಹೋಯಿತು ! ಯಾವಳ ಪ್ರೇಮಕಟಾಕ್ಷಪ್ರಭಾವದಿಂದ ಆತನು ವೈಭವಶಿಖರವನ್ನು ಏರಿದ್ದನೋ, ಅವಳ ವಿಷಯವಾಗಿ ತಿರಸ್ಕಾರವನ್ನು ವ್ಯಕ್ತಪಡಿ ಸಿದರೆ ಮುಂದಣ ವೈಭವವೆಂತೋ ?

ಕೊನೆಗೆ ತನ್ನ ದೈವವನ್ನೇ ಹಳಿದುಕೊಳ್ಳುತ್ತ ಬಜಾಜಿಯು ರೋಷನಳನ್ನು ತನ್ನ ಸಂಗಡ ಕರೆದುಕೊಂಡನು. ಬಜಾಜೀಖಾನನ ಮನೋವಾಜಿಯನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವದಕ್ಕಾಗಿಯೇ ಬೇಗಮಳು ಯುದ್ಧಕ್ಕೆ ಹೊರಟಿ ದ್ದಳು. ಅಂದ ಮೇಲೆ ತನ್ನ ವಿಲಾಸಮಂದಿರವನ್ನು ಅವಳು ವಿಜಾಪುರದಲ್ಲಿಯೇ ಬಿಟ್ಟು ಹೋಗುವದು ಅಸಂಭವನೀಯವಾಗಿತ್ತು. ದಾಸದಾಸಿಯರು, ಪಾತ್ರೆಗಳು, ಪರ್ಯಂಕಗಳು, ಸುಗಂಧವಸ್ತುಗಳು, ಆಹಾರದ ಪದಾರ್ಥಗಳು ಇವುಗಳ ಕೊರ ತೆಯು ಬೇಗಮಸಾಹೇಬರಿಗೆ ಉಂಟಾದರೆ ನಡೆಯಬಹುದೇ ? ಸ್ತ್ರೀ ಸಮಾಜವನ್ನು ಸಂಗಡ ಕರೆದುಕೊಂಡ ಮೇಲೆ ಇದೆಲ್ಲ ಸಂಸಾರದಿಂದ ನಿರ್ಲಿಪ್ತನಾಗಿರುವದು ಶಕ್ಯವೇ ? ಬಜಾಜೀಖಾನನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವುದನ್ನು ವಿಚಾರಪೂರ್ವಕವಾಗಿ ನಿಶ್ಚಯಿಸುವುದಕ್ಕಿಂತ, ಬೇಗಮಳ

ಸೌಖ್ಯದ ವಿಷಯವಾಗಿಯೇ ಹೆಚ್ಚು ವಿಚಾರಮಾಡಬೇಕಾಯಿತು! ಆತನ ವೇಳೆಯೆಲ್ಲವೂ ರೋಷನ ಬೇಗಮಳ ವ್ಯವಸ್ಥೆಯಲ್ಲಿಯೇ ವೆಚ್ಚವಾಗುತ್ತಿತ್ತು!

ಕಟ್ಟಕಡೆಗೆ ಬಜಾಜಿಯ ಸೈನ್ಯವು ವಿಜಾಪುರವನ್ನು ಬಿಟ್ಟು ಪುಣೆಯ ಹಾದಿಯನ್ನು ಹಿಡಿಯಿತು. ಆತನ ಶಿಬಿರದ ಸುತ್ತುಮುತ್ತಲೂ ಒಂದು ಪಟ್ಟಣವೇ ಇದ್ದಂತೆ ತೋರುತ್ತಿತ್ತು. ಯಾಕಂದರೆ ಸೇನಾಪತಿ ಸಾಹೇಬರ ಸ್ತ್ರೀಸಮೂಹವು ಅವರ ಸಂಗಡಲೇ ಇದ್ದುದರಿಂದ ಅವರೆಲ್ಲರಿಗೂ ತಕ್ಕ ವ್ಯವಸ್ಥೆಯು ಆಗಲೇಬೇಕಾಗಿತ್ತು. ಬಾದಶಹನ ಮುದ್ದುಮಗಳು ಶಿಬಿರದಲ್ಲಿದ್ದ ಮೇಲೆ ಬಾದಶಹನಿಂದಲೇ ಉಪಜೀವಿಸಿಕೊಂಡಿದ್ದ ಜನರು, ಅಕೆಯ ಸುಖಸೌಕರ್ಯಗಳ ಕಡೆಗೆ ಲಕ್ಷ್ಯಗೊಡದೆ ಸುಮ್ಮನೆ ಇರುವದುಂಟೇ? ಹಾಡುವುದು, ವಾದ್ಯಗಳನ್ನು ನುಡಿಸುವದು, ಕುಣಿಯುವುದು, ನಾಟಕವಾಡುವುದು ಮೊದಲಾದ ಮನೋರಂಜಕಕ್ರೀಡೆಗಳು ಪ್ರತಿಯೊಂದು ಸ್ಥಳದಲ್ಲಿಯೂ ಅಸಂಖ್ಯಾತವಾಗಿ ನಡೆಯ ತೊಡಗಿದುವು.

ಬಜಾಜಿಯ ಸೈನ್ಯವು ವಿಜಾಪುರದಿಂದ ಹೊರಟು ಈಗ ೩ ನೆಯ ಸ್ಥಳದಲ್ಲಿ ತಳವೂರಿತ್ತು. ಆಗ ವಿಜಾಪುರದಿಂದ ಒಂದು ದೊಡ್ಡ ಸೈನ್ಯವು ಎದುರಿಗೆ ಬರುತ್ತಿರುವುದು ಗೋಚರವಾಯಿತು. ಶಿವಾಜಿ ಭೋಸಲೆಯ ಬಂಡುಗಾರರಾದ ಮರಾಟರು ವಿಜಾಪುರದ ಕಡೆಯಿಂದ ಬರುವ ಸಂಭವವಿದ್ದಿಲ್ಲ. ಆದುದರಿಂದ ಈ ದಂಡನ್ನು ಕಂಡು ಬಜಾಜಿಗೆ ಬಹಳ ಆಶ್ಚರ್ಯವಾಯಿತು. ಆತನು ಸೈನ್ಯಸಹಿತನಾಗಿ ಜಾಗರೂಕನಾಗಿ ನಿಂತನು; ಮತ್ತು ಆ ಸೈನ್ಯವು ಯಾವುದೆಂಬದನ್ನು ಗೊತ್ತುಮಾಡುವದಕ್ಕಾಗಿ ದೂತರನ್ನು ಕಳಿಸಿದನು. ಅದು ವಿಜಾಪುರದ ಸೈನ್ಯವೇ ಆಗಿದ್ದು, ಅಫ್‌ಝುಲ್‌ಖಾನನ ಆಧಿಪತ್ಯದ ಕೆಳಗೆ ಅವನ ಅಪ್ಪಣೆಯ ಮೇರೆಗೆ ಪುಣೆಯ ಕಡೆಗೆ ನಡೆದಿತ್ತು. ಆದುದರಿಂದ ಬಜಾಜೀಖಾನನು ಮತ್ತೆ ಕೆಲವು ದಿವಸ ಅಲ್ಲಿಯೇ ನಿಲ್ಲುವ ನಿಶ್ಚಯಮಾಡಿದನು. ಎರಡೂ ಸೈನ್ಯಗಳು ಭೆಟ್ಟಿಯಾದವು. ಬಜಾಜೀಖಾನನ ಸೈನ್ಯದಲ್ಲಿ ಮರಾಟ ದಂಡಾಳುಗಳು ಹೆಚ್ಚಾಗಿದ್ದರು. ಆದರೆ ಅಫ್‌ಝುಲ್‌ಖಾನನ ಸೈನ್ಯದಲ್ಲಿ ಎಲ್ಲರೂ ಮುಸಲ್ಮಾನರೇ ಇದ್ದರು.

ಸೇನಾಪತಿಗಳಿಬ್ಬರೂ ಪರಸ್ಪರರ ದರ್ಶನವನ್ನು ತಕ್ಕೊಂಡರು. ಮೊದಲಿನಿಂದಲೂ ಅವರು ಒಬ್ಬರನ್ನೊಬ್ಬರು ಸೇರುತ್ತಿದ್ದಿಲ್ಲ. ಆದುದರಿಂದ ಅಫ್‌ಝುಲ್‌ಖಾನನು ಹೆಚ್ಚಾಗಿ ಏನನ್ನೂ ಮಾತಾಡದೆ ಬಾದಶಹನ ಮುದ್ರೆಯಿಂದ ಅಂಕಿತವಾಗಿದ್ದ ಒಂದು ಕಾಗದದ ಚೀಲವನ್ನು ತನ್ನ ನಡುಪಟ್ಟಿಯೊಳಗಿಂದ ತೆಗೆದು ಅದನ್ನು ಬಜಾಜೀಖಾನನ ಕಯ್ಯಲ್ಲಿ ಕೊಟ್ಟನು. ಅದನ್ನು ಓದಿದೊಡನೆಯೇ ಬಜಾಜಿಯು

ಹಣೆಯ ಮೇಲಿನ ನರಗಳು ಉಬ್ಬಿದುವು. ಆದರೂ ಆತನು ಬಾದಶಹನ ಅಪ್ಪಣೆ ಯನ್ನು ಶಿರಸಾವಹಿಸಿ ಅಫ್‍ಝುಲ್‍ಖಾನನಿಗೂ, ಆತನ ಸೈನ್ಯಕ್ಕೂ ತನ್ನ ಶಿಬಿರದಲ್ಲಿ ಉತ್ತಮತರದ ವ್ಯವಸ್ಥೆಯನ್ನು ಇಡಿಸಿದನು. ಬಾದಶಹನಿಂದ ಬಂದ ಪತ್ರವು ಹೀಗೆ ಇತ್ತು:—

"ನಮ್ಮ ಪ್ರೀತಿಯ ಅಳಿಯಂದಿರೂ, ವಿಜಾಪುರದ ಶ್ರೇಷ್ಠಪ್ರತಿಯ ಸರದಾ ರರೂ ಆದ ಬಜಾಜೀಖಾನರಿಗೆ —

"ಶಿವಾಜಿ ಭೋಸಲೆಯ ಸೈನ್ಯವು ಒಳ್ಳೆಯ ಸಿದ್ಧತೆಯಲ್ಲಿದೆಯೆಂಬುದನ್ನು ಕೇಳಿ ದಾಗಿನಿಂದ ನಮಗೆ ನಿಮ್ಮ ವಿಷಯವಾಗಿ ಬಹಳ ಚಿಂತೆಯು ಉತ್ಪನ್ನವಾಯಿತು. ನೀವು ಭೀಮಪರಾಕ್ರಮಿಗಳಾಗಿರುವರೆಂಬುದನ್ನು ನಾವು ಬಲ್ಲೆವು- ಆದರೂ ಶಿವಾಜಿಯಂತಹ ಕಪಟಪಟುವಾದ ಶತ್ರುವಿನೊಡನೆ ನೀವು ಕಾದಬೇಕಾಗಿರುವದ ರಿಂದ, ಪ್ರಸಂಗವಿಶೇಷದಲ್ಲಿ ಉಪಯೋಗಕ್ಕೆ ಬೀಳಬೇಕೆಂಬ ಉದ್ದೇಶದಿಂದ ಸರ ದಾರ ಅಫ್‍ಝುಲ್‍ಖಾನರ ಕೈಕೆಳಗೆ ತುಸು ದಂಡನ್ನು ಕೊಟ್ಟು ನಿಮ್ಮ ಸಾಹಾಯ್ಯ ಕ್ಕೋಸುಗ ಕಳಿಸಿಕೊಟ್ಟಿದ್ದೇವೆ. ಈ ಯುದ್ಧದಲ್ಲಿ ನೀವು ಸೇನಾಧ್ಯಕ್ಷರಾಗಿರು ವದರಿಂದ ಈ ಕೆಲಸವನ್ನು ನೀವು ಉತ್ತಮರೀತಿಯಿಂದ ಕೊನೆಗಾಣಿಸುವಿರೆಂದು ಪೂರ್ಣವಾಗಿ ನಂಬಿದ್ದೇವೆ. ನೀವು ಅಫ್‍ಝುಲ್‍ಖಾನರ ಸೈನ್ಯವನ್ನು ಉಪಯೋ ಗಿಸುವದಿಲ್ಲವೆಂದು ನಮಗೆ ನಿಶ್ಚಯವಾಗಿ ತಿಳಿದಿರುವದರಿಂದ, ಆ ಸೈನ್ಯದ ಆಧಿ ಪತ್ಯವನ್ನು ನಿಮಗೆ ಕೊಟ್ಟಿಲ್ಲ. ಅಫ್‍ಝುಲ್‍ಖಾನರು ಸೈನ್ಯಸಹಿತರಾಗಿ ಸ್ವತಂತ್ರ ವಾಗಿಯೇ ನಿಮ್ಮ ಸಂಗಡ ಪುಣೆಗೆ ಬರುವರು. ಆದರೆ ಅವಶ್ಯವಿದ್ದ ಹೊರತು ಅವರು ಯುದ್ಧದಲ್ಲಿ ಸಮಾವಿಷ್ಟರಾಗಲಿಕ್ಕಿಲ್ಲ ! ಈ ಯುದ್ಧದಲ್ಲಿ ಯಶಸ್ಸು ಸಂ ಪಾದಿಸಿದ ಶ್ರೇಯಸ್ಸು ಪೂರ್ಣವಾಗಿ ನಿಮ್ಮ ಪಾಲಿಗೇ ಬರಲೆಂದು ನಾವು ಮನಃ ಪೂರ್ವಕವಾಗಿ ಇಚ್ಛಿಸುತ್ತೇವೆ. ಆದುದರಿಂದಲೇ ಅಫ್‍ಝುಲ್‍ಖಾನರ ಸೈನ್ಯವ ನ್ನು ನಿಮ್ಮ ಸೈನ್ಯದಲ್ಲಿ ಸೇರಿಸಲು ನಮಗೆ ಅಪೇಕ್ಷೆಯಿಲ್ಲ. ಆದರೂ ನಿಮ್ಮ ಸಂ ರಕ್ಷಣೆಮಾಡುವದು ನಮ್ಮ ಕರ್ತವ್ಯವಾದುದರಿಂದ ಪ್ರಸಂಗಬಿದ್ದಾಗ ಸಾಹಾಯ್ಯ ವು ಸಮೀಪದಲ್ಲಿಯೇ ಇರಲೆಂಬ ಉದ್ದೇಶದಿಂದ ಸದ್ಯಕ್ಕೆ ಅಫ್‍ಝುಲ್‍ಖಾನರನ್ನು ಕಳಿಸಿದ್ದೇವೆ. ವಿಜಾಪುರದ ಸೈನ್ಯವು ಪುಣೆಗೆ ತಲ್ಪಬೇಕಾದರೆ ಎಷ್ಟು ಅವಕಾಶವು ಬೇಕಾಗುತ್ತದೆಂಬುದು ನಿಮಗೆ ಗೊತ್ತೇ ಇದೆ. ಈ ಅಫ್‍ಝುಲ್‍ಖಾನರ ಸೈನ್ಯದ ಯೋಗ್ಯವ್ಯವಸ್ಥೆಗೆ ನೀವು ತಕ್ಕಮಟ್ಟಿಗೆ ನೆರವಾಗತಕ್ಕದ್ದು.

ಖತಮ್ ಮಹಮುದ ಆದಿಲಶಹಾ."

ಅಫ್‍ಝುಲ್‍ಖಾನನ ಮೇಲೆಯೂ ಅವನ ಸೈನಿಕರ ಮೇಲೆಯೂ ಬಜಾಜೀಖಾ ನನ ಅಧಿಕಾರವು ನಡೆಯುತ್ತಿದ್ದಿಲ್ಲವಾದದರಿಂದ ಒಂದೇ ಒರೆಯಲ್ಲಿ ಎರಡು ಕತ್ತಿ

ಗಳನ್ನಿಟ್ಟಂತಾಯಿತು. ಬಜಾಜೀಖಾನನ ಸೈನಿಕರಿಗೂ, ಅಫ್‌ಝುಲ್‌ಖಾನನ ಶಿಪಾಯಿಗಳಿಗೂ ಪ್ರತಿದಿನವೂ ಆಗುತ್ತಿದ್ದ ಹೊಡೆದಾಟಗಳನ್ನು ಸಮಾಧಾನಗೊಳಿಸಬೇಕಾದರೆ ಬಜಾಜಿಗೆ ಸಾಕಾಗಿ ಹೋಗುತ್ತಿತ್ತು ! ಅಫ್‌ಝುಲ್‌ಖಾನನು ಎಂದೂ ಏತಕ್ಕೂ ಹಿಂದೆಗೆಯುತ್ತಿದ್ದಿಲ್ಲ. ಆದುದರಿಂದ ಈ ಹೊಡೆದಾಟಗಳು ಒಮ್ಮೊಮ್ಮೆ ವಿಕೋಪಕ್ಕೆ ಮುಟ್ಟಿ ರಕ್ತಪಾತವೂ ಆಗುತ್ತಿತ್ತು. ಬಜಾಜೀಖಾನನನ್ನು ನಾನು ಲಕ್ಷಿಸುವದೇ ಇಲ್ಲವೆಂಬುದನ್ನು ತೋರಿಸುವ ಹೊತ್ತು ಬಂದಾಗ ಅಫ್‌ಝುಲ್‌ಖಾನನು ಅದನ್ನು ವ್ಯರ್ಥವಾಗಿ ಕಳೆಯುತ್ತಿದ್ದಿಲ್ಲ. ಆದುದರಿಂದ ಆತನ ಶಿಪಾಯಿಗಳು ಬಹುಗರ್ವಿಷ್ಠರಾಗಿದ್ದರು.

ಅಫ್‌ಝುಲ್‌ಖಾನನನ್ನು ಬಾದಶಹನು ಏಕೆ ಕಳಿಸಿರುವನೆಂಬುದನ್ನು ಬಜಾಜೀಖಾನನು ತಿಳಿದುಕೊಳ್ಳದೆ ಇರುವಷ್ಟು ಮೂರ್ಖನಾಗಿದ್ದಿಲ್ಲ. ತಾನು ಜಾತಿಭ್ರಷ್ಟನೆಂದು ದ್ವೇಷಮಾಡುತ್ತಿದ್ದ ಮುಸಲ್ಮಾನಸರದಾರರು ಬಾದಶಹನ ಕಿವಿಯಲ್ಲಿ ಊದಿದುದರಿಂದ ತಾನು ಮುಂದೆ ಬರುವಷ್ಟರಲ್ಲಿಯೇ ತನ್ನ ಹಿಂದೆಯೇ ಈ ಮುಸಲನನನ್ನು ತನ್ನ ಮೇಲೆ ಲಕ್ಷ್ಯವಿಡುವವಕ್ಕಾಗಿಯೂ, ತನ್ನ ಮೇಲಿನ ಅವಿಶ್ವಾಸದಿಂದಲೂ ಬಾದಶಹನು ಕಳಿಸಿರಲಿಕ್ಕೆ ಬೇಕೆಂದು ಬಜಾಜಿಯು ಊಹಿಸಿದನು. ಆದರೆ ಈ ಮಾತನ್ನು ಅವನು ಆಡಿತೋರಿಸುತ್ತಿದ್ದಿಲ್ಲ. ತಾನು ಸಾಯುವ ವರೆಗೆ ಮನಃಪೂರ್ವಕವಾಗಿ ಅದಿಲಶಾಹಿಯ ಬೆಳೆವಣಿಗೆಗೋಸ್ಕರವಾಗಿ ಹೆಣಗಿದರೂ, ಮುಸಲ್ಮಾನರು ಆ ಉಪಕಾರವನ್ನು ಈ ರೀತಿಯಿಂದ ತೀರಿಸುವರೆಂಬುದನ್ನು ನೆನೆದು ಆತನಿಗೆ ಸಂತಾಪವಾಯಿತು. ತಾನು ಸ್ವಧರ್ಮದಿಂದ ಭ್ರಷ್ಟನಾಗಿ, ಬಂಧುಬಾಂಧವರನ್ನು ತೊರೆದು, ಸ್ವಜನರ ಮೇಲೆ ಕತ್ತಿಯನ್ನೆತ್ತಲು ಸಿದ್ಧನಾಗಿದ್ದರೂ, ಮುಸಲ್ಮಾನರು ತನ್ನ ಮೇಲೆ ವಿಶ್ವಾಸವಿಡದಿರುವದನ್ನು ಕಂಡು ಆತನ ಮನಸ್ಸು ಉದ್ವಿಗ್ನವಾಯಿತು. ಅಫ್‌ಝುಲ್‌ಖಾನನೂ ಆತನ ಶಿಪಾಯಿಗಳೂ ಪ್ರತಿದಿನವೂ ಒಂದಿಲ್ಲೊಂದು ನೆವದಿಂದ ಬಜಾಜೀಖಾನನನ್ನು ಅವಮಾನಗೊಳಿಸುತ್ತಿದ್ದರಾದದರಿಂದ, ಈ ಉದ್ವಿಗ್ನತೆಯು ದಿನದಿನಕ್ಕೆ ಬೆಳೆಯುತ್ತ ಹೋಯಿತು. ತನ್ನವರೆಂಬ ಮೋಹಕ್ಕೆ ಒಳಗಾಗಿ ಕೈಯಲ್ಲಿ ಸಿಕ್ಕ ಮರಾಟರನ್ನು ಬಜಾಜೀಖಾನನು ಬಿಟ್ಟುಬಿಡದಂತೆ ನೋಡಿಕೊಳ್ಳುವದಕ್ಕಾಗಿಯೇ, ಬಾದಶಹನು ತನ್ನನ್ನು ಕಳಿಸಿದ್ದಾನೆಂದು ಅಫ್‌ಝುಲ್‌ಖಾನನು ಸ್ಪಷ್ಟವಾಗಿ ಅನ್ನಲಾರಂಭಿಸಿದನು. “ಬಾದಶಹನು ನಿಜವಾಗಿ ನನ್ನ ಮೇಲೆಯೇ ವಿಶ್ವಾಸವುಳ್ಳವನಾಗಿದ್ದಾನೆ. ಬಜಾಜಿಯಮೇಲೆ ಆತನ ನಂಬುಗೆಯು ಎಳ್ಳಷ್ಟೂ ಇಲ್ಲ; ಆದುದರಿಂದಲೇ ಈಗ ಬಾದಶಹನ

ನನ್ನನ್ನು ಕಳುಹಿದ್ದಾನೆ; ಬಜಾಜೀಖಾನನು ಹೆಸರಿಗೆ ಮಾತ್ರ ಸೇನಾಪತಿಯು.” ಈ ಪ್ರಕಾರವಾಗಿ ತನ್ನ ಮನಬಂದಂತೆ ಅಫ್‍ಝುಲ್‍ಖಾನನು ಎಲ್ಲರ ಮುಂದೆಯೂ ಹೇಳಹತ್ತಿದನು. ತನ್ನ ಪ್ರಿಯಪುತ್ರಿಯಾದ ರೋಷನಳಿಗೆ ಅಸಮಾಧಾನವಾಗ ಬಾರದೆಂದು ಬಾದಶಹನು ಹೆಸರಿಗೆ ಮಾತ್ರ ಸೇನಾಪತಿಯ ಶಸ್ತ್ರವನ್ನು ಬಜಾಜಿಯ ಕೈಯಲ್ಲಿ ಕೊಟ್ಟಿದ್ದಾನೆಂದು ಅನ್ನುತ್ತ ಅಫ್‍ಝುಲ್‍ಖಾನನು ಬಜಾಜಿಯ ಅವ ಮಾನವನ್ನು ಮಾಡಲುಪಕ್ರಮಿಸಿದನು. ಅಂದಮೇಲೆ ಬಜಾಜಿಯ ಮನಸ್ಸು ಸಂ ತಪ್ತವಾದುದರಲ್ಲಿ ಆಶ್ಚರ್ಯವೇನು ?

ಪ್ರತಿಯೊಂದು ಸ್ಥಳದಲ್ಲಿಯೂ ಇವರಿಬ್ಬರಲ್ಲಿ ಮೇಲೆ ಹೇಳಿದಂತೆ ವಾಗ್ವಾ ದಗಳು ನಡೆದೇ ನಡೆಯುತ್ತಿದ್ದವು. ಹಿಂದೂಜನರ ದೇವಾಲಯಗಳನ್ನು ಕೆಡಹು ವದೂ, ಅವುಗಳಲ್ಲಿ ಗೋವಧೆಯನ್ನು ನಡೆಯಿಸುವದೂ, ಲೀಲೆಯಿಂದ ಬ್ರಾಹ್ಮ ಣರ ಯಜ್ಞೋಪವೀತಗಳನ್ನು ಕೀಳುವದೂ, ಅವರ ಶಿಖೆಯನ್ನು ಕತ್ತರಿಸುವ ದೂ, ಅಫ್‍ಝುಲ್‍ಖಾನನ ನಿತ್ಯದ ನಡತೆಗಳು! ಮರಾಟರ ಪ್ರಾಯದ ಹೆಂಗಸರ ನ್ನು ಕೆಡಿಸುವುದು ಆತನ ಶಿಪಾಯರ ವರ್ತನವು! ಆದುದರಿಂದ ಇವರು ಯಾವ ಸ್ಥಳವಲ್ಲಿ ಇಳಿಯುತ್ತಿದ್ದರೋ, ಅಲ್ಲಿಯ ಜನರು ತ್ರಸ್ತರಾಗಿ ಹೋಗುತ್ತಿದ್ದರು. ಶಾಂತಸ್ವಭಾವದ ಬಜಾಜೀಖಾನನಿಗೆ ಮೇಲಿನ ಸಂಗತಿಗಳೆಲ್ಲವೂ ಸಹನವಾಗುತ್ತಿ ರಲಿಲ್ಲ. ಹಿಂದೂಜನರಾದರೇನಾಯಿತು ? ಅವರೂ ವಿಜಾಪುರಕ್ಕೆ ಅಧೀನರಾದ ಪ್ರಜೆಗಳೇ ಅಲ್ಲವೇ ? ಅಂತಹರಿಗೆ ತೊಂದರೆಯನ್ನುಂಟುಮಾಡುವುದು ಯೋಗ್ಯ ವಲ್ಲವೆಂದು ಆತನು ಅಫ್‍ಝುಲ್‍ಖಾನನಿಗೆ ಎಷ್ಟೋ ಸಾರೆ ಹೇಳಿ ನೋಡಿದನು. “ಆದರೆ ಮರಾಟರೆಲ್ಲರೂ ಒಂದೇ; ವಿಜಾಪುರದ ಸೀಮೆಯಲ್ಲಿದ್ದವರಾದರೇನಾಯಿ ತು ? ಇದೇ ಪ್ರಕಾರದಿಂದ ಅವರ ತಲೆಯನ್ನು ಕುಕ್ಕದೆ ಇದ್ದರೆ ಅವರು ಎಂದೂ ಹಣ್ಣಾಗಲಿಕ್ಕಿಲ್ಲ!” ಎಂದು ಅಫ್‍ಝುಲನು ನಿಯಮಿತವಾದ ಉತ್ತರವನ್ನು ಕೊಡುತ್ತಿದ್ದನು. ಆದುದರಿಂದ ಅಫ್‍ಝುಲ್‍ಖಾನನ ಸೈನ್ಯದವರಿಂದ ಬಂಡುಗಾ ರರಿಗೆ ಪ್ರತಿಬಂಧವಾಗಲಿಕ್ಕೆ ಪ್ರತಿಯಾಗಿ ಪಾಪ ! ವಿಜಾಪುರದ ರಾಜನಿಷ್ಠ ಪ್ರಜೆ ಗಳಿಗೆ ಮಾತ್ರ ಅಸಹನೀಯವಾದ ದುಃಖವಾಯಿತು ! ಇಂತಹ ಸ್ಥಿತಿಯಲ್ಲಿ ರಾಜನಿಷ್ಠೆಯು ಪ್ರಜೆಗಳಲ್ಲಿ ಹೇಗೆ ನೆಲೆಗೊಳ್ಳಬೇಕು ? ಜನರ ಪ್ರವೃತ್ತಿಯು ಬಂಡು (ದಂಗೆ) ಮಾಡುವ ಕಡೆಗೆ ಏಕೆ ತಿರುಗಬಾರದು ? ಬಂಡುಗಾರರು ಇಂತಹ ಬಾಧೆಯಿಂದಲೂ ಅತ್ಯಾಚಾರದಿಂದಲೂ ಮುಕ್ತರಾಗುತ್ತಿದ್ದರಾದರೆ ಜನರು ಅದೇ ಮಾರ್ಗವನ್ನು ಏಕೆ ಅವಲಂಬಿಸಬಾರದು ?

ಅಫ್‍ಝುಲ್‍ಖಾನನ ಈ ಅನಾಯಕತ್ವದ ಆಚರಣೆಗಳನ್ನು ನೋಡಿ, ಈ ಕೆಲಸವನ್ನು ವಹಿಸಿಕೊಂಡು ತಾನು ಬಹಳ ತಪ್ಪು ಮಾಡಿದಂತಾಯಿತೆಂದು ಬಜಾಜಿಗೆ ಎನಿಸಿತು. ಯಾಕಂದರೆ, ಅಫ್‍ಝುಲ್‍ಖಾನನೂ ಆತನ ಶಿಪಾಯಿಗಳೂ ಅತ್ಯಾಚಾರ ಮಾಡುವವರು; ಆದರೆ ಸೇನಾಪತಿಯಾದುದರಿಂದ ಆ ದೋಷವು ಮಾತ್ರ ಬಜಾಜೀಖಾನನ ತಲೆಯ ಮೇಲೆ ಬರುತ್ತಿತ್ತು. ಜನರೇನು ಮಾಡುವರು ? ಶಿಷ್ಯನ ಅಪರಾಧಕ್ಕೋಸ್ಕರ ಅವರು ಗುರುವನ್ನೇ ಹೊಣೆಗಾರನೆಂದು ತಿಳಿಯುವರು ! ಅಫ್‍ಝುಲ್‍ಖಾನನೂ ಆತನ ಸೈನಿಕರೂ ತನ್ನ ಆಜ್ಞೆಯಲ್ಲಿಲ್ಲ ; ತಾನು ಹೆಸರಿಗೆ ಮಾತ್ರ ಸೇನಾಪತಿಯಾಗಿದ್ದೇನೆ; ಎಂದು ಬಜಾಜಿಯಾದರೂ ಎಷ್ಟು ಜನರ ಮುಂದೆ ಹೇಳುತ್ತ ಹೋಗಬೇಕು ?

ಇಂತಹ ಸ್ಥಿತಿಯಿಂದಲೇ ಎರಡೂ ಸೈನ್ಯಗಳು ಪುಣೆಯ ಸಮೀಪಕ್ಕೆ ಬಂದುವು. “**कपिरपिच कापिशायनमदमत्तो वृश्चिकेन संदष्टः ।**” ಎಂಬಂತೆ ಅಫ್‍ಝುಲ್‍ಖಾನನ ಸ್ಥಿತಿಯುಂಟಾಯಿತು ! ಆತನ ಅತ್ಯಾಚಾರಗಳಿಗೆ ಎಣೆಯೇ ಇಲ್ಲದಾಯಿತು ! ಯಾಕಂದರೆ ಆತನು ಶತ್ರುವಿನ ಪ್ರದೇಶದಲ್ಲಿ ಪ್ರವೇಶಿಸಿದ್ದನು. ಬಜಾಜೀಖಾನನಿಗೆ ಬಹಳ ಬೇಸರವಾಯಿತು. ರೋಷನ ಬೇಗಮಳ ಮೇಲೆ ಆತನ ಪ್ರೇಮವು ಅತಿಶಯವಾಗಿದ್ದುದರಿಂದ ಆಕೆಯ ಸಹವಾಸದಲ್ಲಿಯೂ, ಮಂಜುಲವಾದ ಭಾಷಣದಲ್ಲಿಯೂ, ಸೌಂದರ್ಯದರ್ಶನದಲ್ಲಿಯೂ, ವಿಲಾಸಚೇಷ್ಟೆಯಲ್ಲಿಯೂ ತನಗುಂಟಾಗುತ್ತಿದ್ದ ಈ ಅವಮಾನವನ್ನು ಮರೆಯಲು ಪ್ರಯತ್ನಿಸುತ್ತಿದ್ದನು. ಆದರೇನು ?

ಆದರೇನು ? ಅತ್ತಕಡೆಯಿಂದಲೂ ಒಂದು ಶಲ್ಯವು ಬಂದು ಆತನ ಹೃದಯದಲ್ಲಿ ನಟ್ಟಿತು; ಅದು ತೀಕ್ಷ್ಣವಾಗಿದ್ದುದೇನೋ ನಿಜವೇ ; ಆದರೆ ಅದು ತೀಕ್ಷ್ಣವಾಗಿದ್ದಷ್ಟು ವಿಷಯುಕ್ತವಾಗಿಯೂ ಇತ್ತು !

## ಆರನೆಯ ಪ್ರಕರಣ

### ವಿಘ್ನ !



“ಅವ್ವಾ, ಸ್ವರಾಜ್ಯಕ್ಕೆ ಹೊಸದೊಂದು ವಿಘ್ನವು ಪ್ರಾಪ್ತವಾಗುವಂತೆ ತೋರುತ್ತದೆ ! ಇಂತಹ ಪವಿತ್ರವಾದ ಕಾರ್ಯದಲ್ಲಿ ಕೂಡ ಅಶಿಕ್ಷಿತ ಜನರ ವಿವಾಹದಲ್ಲಿ ಬರುವಂತೆ, ಅನೇಕವಿಘ್ನಗಳು ಅಡ್ಡ ಬರುತ್ತಿರುವುದು ದುರ್ದೈವವೇ ಸರಿ ! ಆದುದರಿಂದ ಮಹಾರಾಷ್ಟ್ರದ ಉದ್ಧಾರವಾಗುವ

ದಿವಸಗಳು ಇನ್ನೂ ಸಮೀಪಿಸಿಲ್ಲವೋ ಏನೋ ಎಂಬ ಭೀತಿಯು ಉತ್ಪನ್ನವಾಗಿದೆ ! ಪರಮೇಶ್ವರನು ಈ ಪವಿತ್ರಕಾರ್ಯಕ್ಕೆ ಅಧಿಕವಾಗಿ ಏಕೆ ಸಹಾಯಮಾಡಲೊಲ್ಲನು ? ”

“ಶಿವಬಾ, ಏನು ನಿನ್ನ ಹುಚ್ಚುತನವಿದು ! ಪರಮೇಶ್ವರನ ಸಾಹಾಯ್ಯವಿಲ್ಲದೆ ನೀನು ಇಷ್ಟೊಂದು ಕೆಲಸ ಮಾಡಿದೆಯಾ ? ನಾಲ್ವರು ‘ ಮಾವಳ ’ರ ಹುಡುಗರನ್ನು ಕೂಡಿಕೊಂಡು ಪರಮಾತ್ಮನ ಸಾಹಾಯ್ಯವಿಲ್ಲದೆ ತೋರಣಾಕೋಟೆಯನ್ನು ತೆಗೆದುಕೊಂಡೆನೆಂದು ನೀನು ತಿಳಿಯುತ್ತೀಯೇನು ? ಈ ಸಂಕಟಗಳಿಂದ ದೇವರು ನಿಮ್ಮೆಲ್ಲರ ಪರೀಕ್ಷೆಯನ್ನು ಮಾಡುತ್ತಾನೆ. ಈ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಹೊರತು ಸ್ವರಾಜ್ಯೋಪಭೋಗವು ನಿಮಗೆ ದೊರೆಯುವಂತಿಲ್ಲ. ಆಕಸ್ಮಿಕವಾಗಿ ಸುಖವು ಪ್ರಾಪ್ತವಾದರೆ ಅದರ ಬೆಲೆಯು ಮನುಷ್ಯನಿಗೆ ಗೊತ್ತಾಗುವದಿಲ್ಲ. ಆದುದರಿಂದ ಅದನ್ನು ಹೇಗೆ ಉಪಭೋಗಿಸಬೇಕೆಂಬುದೂ ಆತನಿಗೆ ತಿಳಿಯುವದಿಲ್ಲ. ಪ್ರಯತ್ನಪೂರ್ವಕವಾಗಿ ಸ್ವರಾಜ್ಯವನ್ನು ಗಳಿಸಿದರೆ ಅದನ್ನು ಉಪಭೋಗಿಸುವಪಕ್ಕೂ ನಿಮಗೆ ಬರುವುದು. ಯಾಕಂದರೆ ನೀವು ಸ್ವರಾಜ್ಯಕ್ಕೆ ಪಾತ್ರವಿರುವರೆಂಬುದೂ, ಸ್ವರಾಜ್ಯದ ರೀತಿಯನ್ನು ಅರಿತಿರುವಿರೆಂಬುದೂ ನಿಮ್ಮ ಪ್ರಯತ್ನಗಳಿಂದಲೇ ಜಗತ್ತಿಗೆ ಗೊತ್ತಾಗುವದು. ಆದುದರಿಂದ ಇನ್ನೊಬ್ಬರ ಕೃಪೆಯಿಂದ ಸಹಜವಾಗಿ ಪ್ರಾಪ್ತವಾಗುವ ಸ್ವರಾಜ್ಯವು ನಮಗೆ ಬೇಡ ಅಂತಹ ಸುಖವು ಪೊಳ್ಳು ಸುಖವು ! ಅದರಿಂದ ಸ್ಥಿರವಾದ ಸುಖವು ಪ್ರಾಪ್ತವಾಗಲಾರದು. ನೀನು ನಿನ್ನ ಪ್ರಯತ್ನವನ್ನು ಚೆನ್ನಾಗಿ ನಡೆಯಿಸು; ಅಂದರೆ ನಿಜವಾಗಿಯೂ ಸ್ವರಾಜ್ಯದ ಮಾಲೆಯು ನಿನ್ನ ಕೊರಳಲ್ಲಿ ಬೀಳುವದು ! ವಿಘ್ನಗಳು ಪ್ರಾಪ್ತವಾಗತಕ್ಕವೇ ; ನಡುವೆ ಬರುವ ವಿಘ್ನಗಳಿಂದಲೇ ಪ್ರಯತ್ನಗಳ ಬೆಲೆಯು ಗೊತ್ತಾಗುವುದು ! ”

“ ಅವ್ವಾ, ಅಮೃತತುಲ್ಯವಾದ ನಿನ್ನ ಭಾಷಣದಿಂದ ನನಗೆ ಹೇಳಕೂಡದಷ್ಟು ಆನಂದವಾಗಿದೆ. ಇತಿಹಾಸವು ಏನೆಂದರೂ ಎನ್ನಲಿ; ನಾನು ಮಾತ್ರ ನನ್ನ ಯಶಸ್ಸಿಗೆ ನೀನೇ ಕಾರಣವೆಂದು ಹೇಳದೆ ಇರಲಾರೆನು! ಅವ್ವಾ, ನಿನ್ನ ವಿಚಾರಗಳು ಉದಾರವಾಗಿಯೂ, ಅನುಕರಣೀಯವಾಗಿಯೂ ಇವೆ; ಅಲ್ಲದೆ ನಿನ್ನ ಸಲಹೆಯು ಅಮೌಲ್ಯವಾಗಿದೆ. ನೀನು ಹೇಳಿದಂತೆ ಮುಸಲ್ಮಾನರಿಂದ ಸ್ವರಾಜ್ಯವನ್ನು ಸೆಳೆದುಕೊಳ್ಳಲೇಬೇಕೆಂದು ನಾನು ನಿಶ್ಚಯಿಸಿದ್ದೇನೆ. ಅವರ ಕೃಪೆಯಿಂದ ಪ್ರಾಪ್ತವಾಗಿ ಅವರ ಅವಕೃಪೆಯಿಂದಲೇ ಪುಡಿಯಾಗಿ ಹೋ

ಗುವ ಉಂಡೆಯು ಚೂರು ನನಗೆ ಬೇಕಾಗಿಲ್ಲ. ಅಂತಹ ಅಸ್ಥಿರವಾದ ವೈಭವದಿಂದ ನನ್ನ ಮನಸ್ಸು ಶಾಂತವಾಗುವುದಿಲ್ಲ. ಈ ಪ್ರಯತ್ನಕ್ಕೆ ವಿಘ್ನಗಳು ಒದಗಬಹುದೆಂಬದನ್ನು ನಾನು ತಿಳಿದಿದ್ದೇನೆ; ಆದರೆ ಸಂಕಟಗಳಿಂದ ಎದೆಗುಂದಿ ಹಿಡಿದ ಕಾರ್ಯವನ್ನು ಎಂದೂ ಬಿಡಲಾರೆನು. ಅದರಂತೆಯೇ ಈ ಸಂಕಟಗಳಿಂದಲೇ ನಮ್ಮ ಪ್ರಯತ್ನಗಳ ಬೆಲೆಯು ಜಗತ್ತಿಗೆ ತಿಳಿದು ಬರುವುದನ್ನೂ ನಾನು ಬಲ್ಲೆನು. ಅಪ್ಪಾ, ನೀನು ಅಪ್ಪಣೆಯನ್ನಿತ್ತು ನೋಡು; ನನ್ನ ಐವತ್ತು ಮೂವತ್ತು ಜನರನ್ನೇ ಸಂಗಡ ಕರೆದುಕೊಂಡು ಬೇಕಾದ ಕೋಟೆಯನ್ನು ವಶಮಾಡಿಕೊಳ್ಳುವೆನು. ನಿಮ್ಮಂತಹ ವೀರಮಾತೆಯ ಹೊಟ್ಟೆಯಲ್ಲಿ ಹುಟ್ಟಿದ ನಾನು ಅಂಜುಬುರುಕನಾಗಿರಬಹುದೇ ? ವಿಜಾಪುರದವರ ಲಕ್ಷ್ಯವು ನನಗಿಲ್ಲ; ದಿಲ್ಲೀಪತಿಯ ಪ್ರಚಂಡವಾದ ಸೈನ್ಯಕ್ಕೂ ನಾನು ಹೆದರುವುದಿಲ್ಲ. ಸ್ವರಾಜ್ಯವನ್ನು ದೊರಕಿಸಬೇಕಾದರೆ ನಾನು ಅವರಿಬ್ಬರೊಡನೆಯೂ ಕಾದಾಡಬೇಕಾಗುವದೆಂಬುದೇನೋ ನಿಜ; ಮತ್ತು ಅದಕ್ಕೆ ನಾನು ನಿಂತ ಹೆಜ್ಜೆಯ ಮೇಲೆಯೇ ಸಿದ್ಧನಾಗಿದ್ದೇನೆ. ಅಪ್ಪಾ, ವಿಜಾಪುರದ ಸೈನ್ಯವು ನನ್ನ ಮೇಲೆ ದಂಡೆತ್ತಿ ಬರುತ್ತಿದೆಯೆಂಬುದನ್ನು ಕೇಳಿ ನನಗೆ ದುಃಖವಾಗಲಿಲ್ಲ; ಆದರೆ ಆ ಸೈನ್ಯದ ಆಧಿಪತ್ಯವನ್ನು ಬಜಾಜೀ ನಿಂಬಾಳಕರನು ಸ್ವೀಕರಿಸಿದ್ದಾನೆಂಬುದನ್ನು ತಿಳಿದು ಮಾತ್ರ ಅತ್ಯಂತ ವ್ಯಸನವಾಯಿತು. ನಮ್ಮ ಸಂಬಂಧಿಕರೂ ನಮ್ಮ ಆಪ್ತರೂ ನಮ್ಮ ಮೇಲೆ ಶಸ್ತ್ರವನ್ನೆತ್ತುವುದನ್ನೂ, ಶಿವಾಜಿಯನ್ನು ಹಿಡಿದು ವಿಜಾಪುರಕ್ಕೆ ಎಳೆದೊಯ್ಯುವ ಪ್ರಯತ್ನಮಾಡುವುದನ್ನೂ, ಹಿಂದೂಧರ್ಮದವರಿಗೆ ತೊಂದರೆ ಕೊಡುವುದನ್ನೂ ತಿಳಿದು ನನ್ನ ಎದೆಯೊಡೆದು ನೀರಾಯಿತು. ಹಿಂದೂಧರ್ಮವನ್ನು ಸಂರಕ್ಷಿಸುವೆನು; ಗೋಬ್ರಾಹ್ಮಣರನ್ನು ಪರಿಪಾಲಿಸುವೆನು; ಮತ್ತು ಹಿಂದೂಸ್ಥಾನದಲ್ಲಿ ಸ್ವರಾಜ್ಯವನ್ನು ಸ್ಥಾಪಿಸುವೆನು: ಎಂದು ನಾನು ಪ್ರತಿಜ್ಞೆಯನ್ನು ಮಾಡಿದೊಡನೆಯೇ ಅನೇಕಮರಾಟರು ನನ್ನ ಈ ವಿಚಾರಗಳು ಪಾಪಪ್ರದವೆಂದು ತಿಳಿಯುವುದೂ, ನನ್ನ ಉಚ್ಛೇದಮಾಡುವದಕ್ಕಾಗಿ ಮುಸಲ್ಮಾನರೊಡನೆ ಸನ್ನದ್ಧರಾಗುವುದೂ ನಮ್ಮ ದೇಶದ ದುರ್ದೈವವೆಂದು ನಾನು ಅಂದೆನು. ಮುಸಲ್ಮಾನರನ್ನು ನಾನು ಲೆಕ್ಕಿಸುವುದಿಲ್ಲ; ಯಾಕಂದರೆ ಹೇಳಿ ಕೇಳಿ ಅವರು ನಮ್ಮ ಶತ್ರುಗಳು. ಅವರು ಹಿಂದೂ ಜನರನ್ನೆಲ್ಲ ಗುಲಾಮರನ್ನು ಮಾಡಲು ಯತ್ನಿಸುತ್ತಾರೆ. ನಾವಾದರೋ, ಅವರಿಂದ ನಮ್ಮ ರಾಜ್ಯವನ್ನು ಸೆಳೆದುಕೊಳ್ಳಲು ಪ್ರಯತ್ನಮಾಡುತ್ತೇವೆ. ಆದರೆ ನಮ್ಮ ಮರಾಟರೇ ನಮ್ಮ ಮೇಲೆ

ತಿರುಗಿ ಬಿದ್ದರೆ ಪ್ರಾಕ್ತನಕ್ಕೆ ದೋಷವನ್ನೇಕೆ ಕೊಡಬಾರದು? ಬಜಾಜಿಯು ನಮ್ಮ ಆಪ್ತನಲ್ಲವೇ? ನಾವು ಆತನ ಸಾಹಾಯ್ಯವನ್ನೇಕೆ ಬಯಸಬಾರದು? ಆದರೆ ಆತನೇ ಇಂದು ಮಹಾರಾಷ್ಟ್ರ ವೃಕ್ಷವನ್ನು ಛೇದಿಸಲು ಕಯ್ಯಲ್ಲಿ ಕೊಡಲಿಯನ್ನು ಹಿಡಿದು ಸಿದ್ಧನಾಗಿರುತ್ತಾನೆ. ಅವ್ವಾ, ನ್ಯಾಯಾನ್ಯಾಯಗಳು ಇನ್ನೂ ನಮ್ಮ ಮರಾಟಸರದಾರರಿಗೆ ತಿಳಿಯುವುದಿಲ್ಲ; ಇಷ್ಟೇ ಅಲ್ಲ; ತಮ್ಮ ನಿಜವಾದ ಸ್ವಾರ್ಥವು ಯಾವುದೆಂಬುದನ್ನು ಕೂಡ ಅವರು ಅರಿಯರು."

ಈ ಮಾತುಗಳನ್ನು ಶಿವಾಜಿಯು ತನ್ನ ಮಾತೆಗೆ ಹೇಳಿದನೆಂಬುದನ್ನು ನಮ್ಮ ವಾಚಕರು ಊಹಿಸದೆ ಇರಲಾರರು.

ಜಿಜಾಬಾಯಿಯು ಮತ್ತೆ ಮಾತನಾಡಿದಳು:—"ಈ ಸಂಗತಿಯನ್ನು ಮರಾಟರಿಗೆ ತಿಳಿಸುವುದಕ್ಕಾಗಿಯೇ ನೀನು ಅವತರಿಸಿರುತ್ತೀ. ಇದು ಅವರಿಗೆ ಇನ್ನೂ ಗೊತ್ತಾಗಿಲ್ಲ. ನಿನ್ನ ಪರಾಕ್ರಮಧೈರ್ಯಗಳು ಅವರಿಗೆ ಗೊತ್ತಾಗಿವೆ. ಆದರೆ ನಿನ್ನ ಉಚ್ಚಧ್ಯೇಯವೂ ಉದಾತ್ತಶೀಲವೂ ಅವರಿಗೆ ಅವಗತವಾಗಿಲ್ಲ. ಆದರೆ ನೀನು ಅದನ್ನು ಅವರಿಗೆ ತಿಳಿಸಿಕೊಟ್ಟರೆ ಮಹಾರಾಷ್ಟ್ರವೆಲ್ಲ ನಿನ್ನದೆಂದೇ ತಿಳಿ. ಕೊಡಲಿಯ ಕಾವು ಮೂಲವೃಕ್ಷದ ವಿನಾಶಕ್ಕೇ ಕಾರಣೀಭೂತವಾಗುವಂತೆ, ನಮ್ಮೊಳಗಿನ ಕೆಲವು ಕೃತಘ್ನರು ಅಲ್ಪಲಾಭಕ್ಕೋಸ್ಕರ ಮಾತೃಭೂಮಿಯನ್ನು ಮಾರಿಕೊಳ್ಳುವ ಭಯಂಕರವಾದ ಪಾಪಕ್ಕೆ ಗುರಿಯಾಗುತ್ತಾರೆ ಬಜಾಜೀಖಾನನು ಇಂತಹರಲ್ಲಿಯೇ ಒಬ್ಬನು. ಆತನು ಪತಿತನಾಗಿದ್ದಾನೆ. ಹುಟ್ಟುವಾಗ ಮಗುವು ಅಡ್ಡ ಬಂದರೆ, ನಿಷ್ಠುರರಾಗಿ ಅದನ್ನು ಕತ್ತರಿಸಲೇಬೇಕಾಗುವದು. ಬಜಾಜಿಯು ನಮ್ಮ ಆಪ್ತರೊಳಗಿನವನೇನೋ ಅಹುದು; ಆದರೆ ಆತನಿಗೆ ತಕ್ಕ ಪ್ರಾಯಶ್ಚಿತ್ತವನ್ನುಂಟುಮಾಡಿದ ಹೊರತು ನಮ್ಮ ದೇಶವು ಉದ್ಧಾರವಾಗುವಂತಿಲ್ಲ."

"ಅವ್ವಾ, ಈ ಮಾತೇ ನನ್ನ ಮನಸ್ಸಿಗೆ ಖೇದವನ್ನುಂಟುಮಾಡುತ್ತದೆ. ಬಜಾಜೀನಿಂಬಾಳಕರನಂತಹ ಶೂರಸರದಾರನು ನಮ್ಮ ಪಕ್ಷದಲ್ಲಿದ್ದರೆ ನಮ್ಮ ಕಾರ್ಯವು ಎಷ್ಟೋ ಶೀಘ್ರವಾಗಿ ನೆರವೇರುತ್ತಿತ್ತು. ಆದರೆ ಇಂದು ಬಜಾಜಿಯನ್ನು ನಾಶಮಾಡುವದರಲ್ಲಿಯೇ ನನ್ನ ಶಕ್ತಿಯನ್ನು ಖರ್ಚುಮಾಡಬೇಕಾದ ವಿಚಿತ್ರ ಪ್ರಸಂಗವು ಬಂದೊದಗಿದೆ! ಮುಸಲ್ಮಾನರನ್ನು ಹಣ್ಣುಮಾಡುವ ಮಾತು ದೂರದಲ್ಲಿಯೇ ಉಳಿದಿದೆ. ಅವರು ಬಹಳ ಧೂರ್ತರು. ಮುಳ್ಳಿನಿಂದಲೇ ಮುಳ್ಳು ತೆಗೆಯುವದನ್ನು ಅವರು ಯೋಚಿಸುತ್ತಾರೆ. ಯಾವ ಪಕ್ಷವು ನಾಶವಾದರೂ ಅವ

ರಿಗೆ ವಿಹಿತವೇ ! ಗೆದ್ದವನಿಗಾದರೂ ಸಾಕಾಗಿ ಹೋಗುವದು ! ಹೀಗಾಗಿ ಮುಸಲ್ಮಾನರ ರೋಗವು ಔಷಧವಿಲ್ಲದೆ ವಾಸಿಯಾಗುವದು. ಆದುದರಿಂದ ಇದಕ್ಕೆ ಬೇರೆ ಏನಾದರೂ ಉಪಾಯವಿಲ್ಲವೇ ? ಎಂದು ಕೇಳುತ್ತೇನೆ. ಕಾಳುಗಳನ್ನೊಗೆದು ಕೋಳಿಗಳಲ್ಲಿ ಕಾದಾಟವನ್ನು ಹೂಡಿ, ತಾವು ಮಾತ್ರ ದೂರದಿಂದಲೇ ಚಮತ್ಕಾರವನ್ನು ನೋಡುತ್ತ ಕುಳಿತುಕೊಳ್ಳುವಂತೆ ಮುಸಲ್ಮಾನರು ನಡೆಯುತ್ತಿದ್ದಾರೆ. ಅವರ ಈ ಹಂಚಿಕೆಯನ್ನು ತಿಳಿದು ನಾವು ಬೇರೊಂದು ಹಂಚಿಕೆಯನ್ನು ಏಕೆ ಹುಡುಕಬಾರದು ? ನಮ್ಮೊಳಗೇ ಹೊಡೆದಾಡಿ ನಾವು ಹೈರಾಣರಾದೆವೆಂದರೆ, ಮುಸಲ್ಮಾನರೊಡನೆ ಕಾದುವ ಸಾಮರ್ಥ್ಯವು ನಮ್ಮಲ್ಲಿ ಉಳಿಯಲಾರದು. ನೂರಾರು ವರುಷ ಪರಕೀಯರ ಕೈಕೆಳಗೆ ಇದ್ದುದರಿಂದ ಮರಾಟರು ನಿಃಸತ್ವರಾಗಿದ್ದಾರೆ. ಆದುದರಿಂದ ನಮ್ಮ ಶಕ್ತಿಯು ವ್ಯಯವಾಗಿದೆ. ಸಂಕಟನಿವಾರಣವಾಗುವಂತಹ ಸುಲಭೋಪಾಯವು ನಮಗೆ ಬೇಕಾಗಿದೆ. ನಾನು ಯುದ್ಧಮಾಡುವದಕ್ಕೆ ಹೆದರುವದಿಲ್ಲವೆಂಬುದು ನಿಮಗೆ ಗೊತ್ತಿದೆ; ನಿಜವಾದ ಕ್ಷತ್ರಿಯನಿಗೆ ಯುದ್ಧದ ಹೊರತು ಇನ್ನಾವುದು ಪ್ರಿಯಕರವಾಗುವುದು! ಆದರೂ ಮಹಾರಾಷ್ಟ್ರದ ಉದ್ಧಾರವೇ ನನ್ನ ಧ್ಯೇಯವು. ಈಗಿನ ಕಾಲಕ್ಕೆ ಬಜಾಜೀ ನಿಂಬಾಳಕರನು ಪತಿತನಾಗಿದ್ದರೂ, ಆತನ ಸಾಹಾಯ್ಯವನ್ನು ಸಂಪಾದನೆಮಾಡುವದೇ ಯೋಗ್ಯವೆಂದು ನನಗೆ ತೋರುವದು. ನಿಂಬಾಳಕರನೊಡನೆ ಯುದ್ಧಮಾಡುವದರಲ್ಲಿ ಅರ್ಥವಿಲ್ಲ. ಆತನನ್ನು ನಾನು ಸಹಜವಾಗಿಯೇ ಜಯಿಸಬಲ್ಲೆನು. ಆದರೆ ಮುಂದಿನ ಪರಿಣಾಮವೇನು ? ಇದಕ್ಕೆ ವಿಪರೀತವಾಗಿ ಆತನಿಂದ ತುಸುವಾದರೂ ಸಾಹಾಯ್ಯವು ನಮಗೆ ದೊರೆತರೆ ಮಹಾರಾಷ್ಟ್ರವು ಸ್ವತಂತ್ರವಾಗುವ ದಿವಸವು ಬೇಗನೆ ಬರಬಹುದು. ”

“ ಶಿವಬಾ, ನೀನು ಹೇಳುವ ಪ್ರತಿಯೊಂದು ಅಕ್ಷರವೂ ನಿಜವಿರುತ್ತದೆ. ಆದರೆ ಅದಕ್ಕೆ ಅಪ್ರತಿಮವಾದ ಪುಣ್ಯವು ಬೇಕು. ಬಜಾಜಿಯು ಪತಿತನಾಗಿದ್ದಾನೆ ; ಆತನನ್ನು ಪಾವನಗೊಳಿಸುವ ಸಾಮರ್ಥ್ಯವು ನಿನ್ನಲ್ಲಿದ್ದರೆ ನೀನು ಆ ಕೆಲಸಕ್ಕೆ ಹೋಗು. ಯಾಕಂದರೆ, ಈ ಪತಿತರನ್ನು ನಂಬಲಾಗುವುದಿಲ್ಲ. ಯಾವ ಕಾಲದಲ್ಲಿ ಇವರು ವಿಶ್ವಾಸಘಾತಮಾಡುವರೆಂಬುದರ ನಿಯಮವೇ ಇರುವುದಿಲ್ಲ. ಇವರು ತಮ್ಮ ಧರ್ಮದ ಮೇಲೆ ವಿಶ್ವಾಸವನ್ನಿಡುವುದಿಲ್ಲ ; ಅನ್ಯಧರ್ಮವನ್ನು ನಂಬುವದಿಲ್ಲ; ಹಿಂದಿನ ಸಾಂಪ್ರದಾಯಗಳನ್ನು ಲೆಕ್ಕಿಸುವದಿಲ್ಲ; ಹೊಸ ಸಾಂಪ್ರದಾಯಗಳು ಇವರಿಗೆ ವಶವಾಗುವುದಿಲ್ಲ. ಈ ತ್ರಿಶಂಕುಗಳ ಸಂಗಡ ಸ್ನೇಹಬೆಳೆ

ಯಿಸುವ ಮೊದಲು ನೀನು ಚೆನ್ನಾಗಿ ವಿಚಾರಮಾಡು. ಶುದ್ಧಿ-ಸಂಘಟನದಿಂದ ಪತಿತೋದ್ಧಾರವನ್ನು ಮಾಡುವ ಸಾಮರ್ಥ್ಯವು ನಿನ್ನಲ್ಲಿದ್ದರೆ, ಇವರ ನೆರವನ್ನು ಪಡೆಯುವದಕ್ಕೆ ನೀನು ಪ್ರಯತ್ನಮಾಡು. ಇಲ್ಲದಿದ್ದರೆ ಇವರು ಕೂದಲೆಳೆಯಿಂದಲೇ ನಿನ್ನ ಕತ್ತನ್ನು ಕತ್ತರಿಸಿ ಬಿಟ್ಟಾರು! ಶಿವಬಾ, ಇವರೊಡನೆ ಯುದ್ಧ ಮಾಡುವುದರಲ್ಲಿಯೇ ನಮ್ಮ ಶಕ್ತಿಯನ್ನು ವೆಚ್ಚಮಾಡಿಕೊಳ್ಳುವುದಕ್ಕಿಂತ ಇವರ ಸಾಹಾಯ್ಯವು ದೊರೆತರೆ ನಮ್ಮ ದೇಶವು ಬೇಗನೆ ಸ್ವತಂತ್ರವಾಗುವುದರಲ್ಲಿ ಸಂದೇಹವಿಲ್ಲ. ಆದರೆ ಇವರನ್ನು ವಶಮಾಡಿಕೊಳ್ಳುವವನಲ್ಲಿ ಉಜ್ವಲವಾದ ಪುಣ್ಯವಿರಲಿಕ್ಕೇಬೇಕು. ಅದು ಸಾಮಾನ್ಯರಿಗೆ ಸಾಧಿಸುವ ಕೆಲಸವಲ್ಲ. ಉದಾತ್ತವಾದ ಶೀಲವುಳ್ಳವನಿಗೇ ಇದು ಸಾಧ್ಯವಾಗುವುದು. ಈ ಮಾತನ್ನು ಚೆನ್ನಾಗಿ ವಿಚಾರಮಾಡು."

ಶಿವಾಜಿಯು ತನ್ನ ಪ್ರೀತಿಯ ಅಪ್ಪನ ಕಾಲ್ಗಳ ಮೇಲೆ ಅತಿಶಯಭಕ್ತಿಭಾವದಿಂದ ತಲೆಯನ್ನಿಟ್ಟು ಮಾತನಾಡಿದನು. "ಅಪ್ಪಾ, ನೀನು ಸಾಕ್ಷಾತ್ ದೇವತೆಯು. ನಿನ್ನ ಅಮೃತಮಯವಾದ ಹಸ್ತವನ್ನು ನನ್ನ ಮಸ್ತಕದ ಮೇಲೆ ಇಡು. ನಿನ್ನ ಆಶೀರ್ವಾದಬಲದಿಂದ ನಾನು ಈ ಕೆಲಸದಲ್ಲಿ ಯಶಸ್ಸನ್ನು ಹೊಂದುವೆನು. ನನ್ನ ಉಚ್ಚಧ್ಯೇಯವೂ ಉದಾತ್ತಶೀಲವೂ ಮರಾಟರಿಗೆ ತಿಳಿದರೆ, ಅವರು ಬೇಗನೆ ಸ್ವತಂತ್ರರಾಗುವರೆಂದು ನೀನು ಮೊದಲೇ ಹೇಳಿದೆಯಷ್ಟೇ! ನಾನು ಆ ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ಪ್ರಯತ್ನಮಾಡುತ್ತೇನೆ; ನಿನ್ನ ಅಮೃತಮಯವಾದ ದೃಷ್ಟಿಯು ಮಾತ್ರ ನನ್ನ ಮೇಲಿರಲಿ. ಮಹಾರಾಷ್ಟ್ರವನ್ನು ಸ್ವತಂತ್ರವಾಗೆ ಮಾಡಬೇಕಾದುದೇ ನನ್ನ ಧ್ಯೇಯವು. ಅಂದಮೇಲೆ ನನ್ನಲ್ಲಿ ಮಹತ್ವಾಕಾಂಕ್ಷೆಯು ಇಲ್ಲವೆಂದು ಹೇಗೆ ಹೇಳಲಿ? ಆದರೂ ನನಗೆ ಸ್ವಾರ್ಥವು ಬೇಕಾಗಿಲ್ಲ. ನಾನು ಪ್ರತಿಷ್ಠೆಯನ್ನು ಬಳೆಯಿಸಲು ಪ್ರಯತ್ನಬಡುವುದಿಲ್ಲ. ರಾಜನೆನಿಸಿಕೊಳ್ಳಲು ಆಶಿಸುವುದಿಲ್ಲ. ಆದರೆ ನಾನು ಮಾಡುವುದೆಲ್ಲವನ್ನೂ ಮಹಾರಾಷ್ಟ್ರದ ಸ್ವಾತಂತ್ರ್ಯಕ್ಕೋಸ್ಕರವಾಗಿಯೂ, ಹಿಂದೂಧರ್ಮದ ಉದ್ಧಾರಕ್ಕೋಸ್ಕರವಾಗಿಯೂ ಮಾಡುತ್ತೇನೆ. ಇದನ್ನೇ ನಾನು ಎಲ್ಲರಿಗೂ ಚೆನ್ನಾಗಿ ತಿಳಿಸಬೇಕಾಗಿದೆ. ಬಜಾಜೀನಿಂಬಾಳಕರನು ಪತಿತನಾಗಿರಬಹುದು; ಆದರೆ ಈ ಯುದ್ಧದಲ್ಲಿ ಶಿವಾಜಿಭೋಸಲೆಯ ಸ್ವಾರ್ಥವು ಏನೂ ಇಲ್ಲದಿದ್ದರೆ ಅವನು ಪಾವನನೇ ಆಗುವನು. ಅಪ್ಪಾ, ಈ ಕೊಡಲಿಯ ಕಾವು ಮೂಲವೃಕ್ಷದ ಉಚ್ಛೇದಕ್ಕೇ ಕಾರಣವಾಗಿದೆ. ಆದರೆ, ನಮ್ಮ ದೇಶಧರ್ಮಗಳ ಉದ್ಧಾರಕ್ಕೋಸ್ಕರವಾಗಿ ಈ ಕೊಡಲಿಯ ಕಾವಿಗೆ ಹಸರು ಚಿಗುರುಗಳನ್ನು ಒಡೆಯಿಸಲು ನಾನು ಪ್ರಯತ್ನ ಮಾಡುತ್ತೇನೆ. ನಿಮ್ಮ ಆಶೀರ್ವಾದವಿರಲಿ!"

## ಏಳನೆಯ ಪ್ರಕರಣ

## ವಿಲಕ್ಷಣ ದಾಂಪತ್ಯ!


ವಾಜಿ ಮಹಾರಾಜನು ತಾನಾಜಿ ಮತ್ತು ಏಸಾಜಿಯೊಡನೆ ನೂತನವಾಗಿ ಉದ್ಭವಿಸಿದ ಈ ಸಂಕಟದ ವಿಷಯವಾಗಿ ಚರ್ಚೆಯನ್ನು ಮಾಡುತ್ತ ಕುಳಿತುಕೊಂಡಿದ್ದನು. ಬಜಾಜೀಖಾನನು ಮುಸಲ್ಮಾನೀ ಧರ್ಮದ ಮೇಲೆ ಎಷ್ಟರ ಮಟ್ಟಿಗೆ ನಿಷ್ಠೆಯುಳ್ಳವನಾಗಿದ್ದಾನೆಂಬುದನ್ನು ತಿಳಿದುಕೊಳ್ಳಬೇಕಾಗಿತ್ತು. ಬಜಾಜೀಖಾನನಿಗೆ ವಿಜಾಪುರದ ಆಸ್ಥಾನದಲ್ಲಿ ಒಳ್ಳೆಯ ಮಾನಮರ್ಯಾದೆಯಿದ್ದ ಸಂಗತಿಯು ಎಲ್ಲರಿಗೂ ಗೊತ್ತಿತ್ತು. ಆತನು ಬಾದಶಹನ ಅಳಿಯನಾಗಿದ್ದನೆಂಬುದು ಸರ್ವತ್ರಶ್ರುತವಾಗಿತ್ತು. ಆದರೂ ಇಂತಹನನ್ನು ತನ್ನ ಪಕ್ಷಕ್ಕೆ ಎಳೆಕೊಳ್ಳುವೆನೆಂದು ಶಿವಾಜಿಯು ಪ್ರತಿಜ್ಞೆಯನ್ನು ಮಾಡಿಬಿಟ್ಟಿದ್ದನು. ಆದುದರಿಂದ ಬಜಾಜೀಖಾನನ ಮನಸ್ಸಿನ ಸ್ಥಿತಿಯನ್ನು ತಿಳಿದುಕೊಳ್ಳುವುದು ಅತ್ಯವಶ್ಯವಿತ್ತು. ಆತನ ಮನಃಸ್ಥಿತಿಯನ್ನು ತಿಳಿದುಕೊಂಡ ಹೊರತು ಮುಂದಿನ ಉಪಾಯವನ್ನು ಚಿಂತಿಸುವುದು ವ್ಯರ್ಥವಾಗಿತ್ತು. ಬಾದಶಹನು ಬಜಾಜೀಖಾನನ ಮೇಲೆ ಅತಿಶಯವಾಗಿ ಪ್ರೇಮವುಳ್ಳವನಾಗಿದ್ದರೂ, ಉಳಿದ ಮುಸಲ್ಮಾನ ಸರದಾರರು ಅವನನ್ನು ಎಷ್ಟರ ಮಟ್ಟಿಗೆ ಪ್ರೀತಿಸುತ್ತಿದ್ದರೆಂಬುದು ದೊಡ್ಡ ಪ್ರಶ್ನೆಯೇ ಆಗಿತ್ತು. ಅಫ್‌ಝುಲ್‌ಖಾನನೂ, ಇತರ ಕೆಲವು ಸರದಾರರೂ ಜಾತಿಭ್ರಷ್ಟನೆಂದು ಬಜಾಜಿಯನ್ನು ನಿಂದಿಸುತ್ತಾರೆಂಬ ಸಂಗತಿಯು ಕರ್ಣೋಪಕರ್ಣವಾಗಿ ಶಿವಾಜಿಯ ಕಿವಿಗೆ ಮುಟ್ಟಿತ್ತು. ಬಜಾಜೀಖಾನನು ಸೇನಾಪತಿಯಾಗಿದ್ದರೂ, ಆತನ ಮೇಲೆ ಅಫ್‌ಝುಲ್‌ಖಾನನನ್ನು ಸ್ವತಂತ್ರವಾಗಿ ನಿಯಮಿಸಿದುದನ್ನು ಕೇಳಿದ ಬಳಿಕಂತೂ ಈ ಮಾತಿನಲ್ಲಿ ತಥ್ಯಾಂಶವು ಹೆಚ್ಚಾಗಿರಬೇಕೆಂದೇ ಎಲ್ಲರಿಗೂ ನಿಶ್ಚಯವಾಗಿ ತಿಳಿದಿತ್ತು.

ಆದರೆ, ರೋಷನಬೇಗಮಳು ಬಜಾಜಿಯ ಸಂಗಡ ಬಂದಿರುವ ಸಂಗತಿಯು ಯಾರಿಗೂ ಒಳಿತೆನಿಸಲಿಲ್ಲ. ಯಾಕಂದರೆ ಬಜಾಜಿಯು ಅವಳ ಸೌಂದರ್ಯಕ್ಕೆ ಪೂರ್ಣವಾಗಿ ಅಧೀನನಾಗಿದ್ದನು. ರೋಷನಬೇಗಮಳ ಮೋಹಜಾಲಕ್ಕೆ ಅಷ್ಟೊಂದು ವಿಚಿತ್ರರೀತಿಯಿಂದ ಅಧೀನನಾಗಿದ್ದುದರಿಂದಲೇ ಆತನು ತನ್ನನ್ನು ತಾನೇ ಮರೆತಿದ್ದನು. “ಹಿಂದೆ ಒಂದಾನೊಂದು ಕಾಲದಲ್ಲಿ ತನಗೊರ್ವ ಹಿಂದೂ

ಹೆಂಡತಿಯು ಇದ್ದಳು. ಅವಳನ್ನು ತಾನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿ ಸುತ್ತಿದ್ದೆನು; ಅವಳ ಹೊಟ್ಟೆಯಲ್ಲಿ ಒಂದು ಸಂತತಿಯು ಜನಿಸಿತ್ತು." ಎಂಬ ಈ ಸಂಗತಿಗಳನ್ನು ಆತನು ಪೂರ್ಣವಾಗಿ ಮರೆತುಬಿಟ್ಟಿದ್ದನು. ವಿಜಾಪುರದ ಬಾದ ಶಹನ ಅಳಿಯನಾದ ಬಳಿಕ ತನ್ನ ಹೆಂಡರುಮಕ್ಕಳ ವಿಷಯವಾಗಿ ಆತನು ಎಳ್ಳ ಷ್ಟಾದರೂ ವಿಚಾರಮಾಡಲಿಲ್ಲ. ಈ ಪ್ರಕಾರವಾಗಿ ಆತನು ರೋಷನಬೇಗಮಳ ಕಯ್ಯೊಳಗಿನ ಗೊಂಬೆಯಾಗಿದ್ದನಾದುದರಿಂದ, ಅವಳನ್ನು ಚೆನ್ನಾಗಿ ವ್ಯವಸ್ಥೆ ಗೊಳಿಸಿದ ಹೊರತು, ಬಜಾಜಿಯನ್ನು ತನ್ನ ಪಕ್ಷಕ್ಕೆ ಒಲಿಸಿಕೊಳ್ಳುವುದು ಅಸಾ ಧ್ಯವೆಂಬುದು ಎಲ್ಲರಿಗೂ ತಿಳಿದಿತ್ತು. ಆದರೆ ಇದೆಲ್ಲವೂ ಸಾಧಿಸುವುದೆಂತು? ಎಂಬ ವಿಷಯವನ್ನೇ ಇಂದು ಎಲ್ಲರೂ ಚರ್ಚಿಸುತ್ತ ಕುಳಿತಿದ್ದರು. ಶಿವಾಜಿಯು ತನ್ನ ಯಾವುದೊಂದು ಯುಕ್ತಿಯನ್ನು ಉಪಯೋಗಿಸುವ ಮೊದಲು ತನ್ನ ಪ್ರೀತಿಯ ತಾಯಿಯ ಅನುಮತಿಯನ್ನೂ, ಆ ಮೇಲೆ ತನ್ನ ಜೀವದ ಗೆಳೆಯರ ಸಮ್ಮತಿಯನ್ನೂ ತೆಗೆದುಕೊಳ್ಳುತ್ತಿದ್ದನು. ಅದರಂತೆಯೇ ಇಂದು ತನ್ನ ಮಿತ್ರ ರೊಡನೆ ಗುಪ್ತವಾಗಿ ಈ ವಿಷಯವನ್ನು ಚರ್ಚಿಸುತ್ತಿದ್ದನು. ಚರ್ಚೆಯೇನೋ ಚೆನ್ನಾಗಿ ನಡೆದಿತ್ತು. ಆದರೆ ನಿರ್ಣಯವಿನ್ನೂ ಆಗಿರಲಿಲ್ಲ. ಇಷ್ಟರಲ್ಲಿ ದ್ವಾರ ಪಾಲಕನು ಬಂದು 'ಒಬ್ಬ ಮರಾಟರ ಹುಡುಗನು ಮಹಾರಾಜರನ್ನು ಕಾಣಲು ಅಪೇಕ್ಷಿಸುತ್ತಾನೆ.' ಎಂದು ಹೇಳಿದನು.

ಶಿವಾಜಿಯು ದ್ವಾರಪಾಲಕನಿಗೆ ಕೆಲವು ಪ್ರಶ್ನೆಗಳನ್ನು ಕೇಳಿದನು. "ಆತನ ಪರಿಚಯವು ಯಾರಿಗಾದರೂ ಉಂಟೋ ? ಆತನ ಮುಖಚರ್ಯೆಯು ಹೇಗಿದೆ ? ಆತನ ಹತ್ತರ ಆಯುಧಗಳೇನಾದರೂ ಇವೆಯೇ ? ಆತನ ಸಂಗಡ ಬೇರೆ ಯಾರಾ ದರೂ ಇದ್ದಾರೆಯೇ ? " ಎಂಬದಾಗಿ ಕೇಳಿದ ಬಳಿಕ ಆ ಹುಡುಗನನ್ನು ಒಳಗೆ ಬಿಡಬಹುದೆಂದು ಬಾಗಿಲುಕಾಯುವವನಿಗೆ ಹೇಳಿದನು.

ಶಿವಾಜಿಯ ಅಪ್ಪಣೆಯಂತೆ ಆ ಹುಡುಗನು ಒಳಗೆ ಬಂದು ವಿನಯದಿಂದ ಬಾಗಿ ನಮಸ್ಕಾರಮಾಡಿ ನಮ್ರತೆಯಿಂದ ಎದುರಿನಲ್ಲಿ ನಿಂತುಕೊಂಡನು. ಆತನ ಶರೀರವು ಒಳ್ಳೆಯ ಕೋಮಲವಾಗಿತ್ತು; ಆತನ ವಯಸ್ಸು ಸುಮಾರು ಹದಿನೈದು ಹದಿನಾರು ವರ್ಷಗಳದಿರಬಹುದು. ಆತನು ಮುಖಮುದ್ರೆಯಿಂದ ಸುಂದರನಾಗಿ ನೋಡುವುದಕ್ಕೆ ಮನೋಹರನಾಗಿದ್ದನು. ಆತನ ಮೈಬಣ್ಣವು ಗುಲಾಬಿಯ ಹೂವಿನಂತೆ ಕೆಂಪಗಾಗಿರದಿದ್ದರೂ ಕಪ್ಪಾಗಿರಲಿಲ್ಲ. ಆತನ ಮೈಯು ಕೃಶವಾಗಿತ್ತು.

ಆದುವರಿಂದಲೇ ಆತನು ಅತ್ಯಂತಕೋಮಲನಾಗಿದ್ದನು. ಆತನ ಕಣ್ಣುಗಳಲ್ಲಿ ವಿಲಕ್ಷಣವಾದ ತೇಜಸ್ಸಿತ್ತು.

ಸುಂದರವೂ ವಿನಯಶೀಲವೂ ಆದ ಆತನ ಮುಖವನ್ನು ಜನರೆಲ್ಲರೂ ನೋಡಲಾರಂಭಿಸಿದರು. ಆಗ ಶಿವಾಜಿಯು ಮಮತೆಯ ಸ್ವರದಿಂದ ಮಾತನಾಡಿದನು:– "ಮಗೂ, ನೀನು ಯಾರು ? ನನ್ನ ಹತ್ತಿರ ನಿನ್ನ ಕೆಲಸವೇನು ? " ಈ ಪ್ರಶ್ನೆಗಳನ್ನು ಕೇಳಿದೊಡನೆಯೇ ಹುಡುಗನ ಮುಖಮುದ್ರೆಯು ಬಾಡಿತು; ಕಣ್ಣುಗಳಲ್ಲಿ ನೀರು ತುಂಬಿ ಬಂದಿತು. ಇದನ್ನು ಕಂಡು ಎಲ್ಲರೂ ಆತನನ್ನು ಕರುಣಾಪೂರ್ಣದೃಷ್ಟಿಯಿಂದ ನೋಡತೊಡಗಿದರು. ಶಿವಾಜಿಮಹಾರಾಜನ ಅಮೃತಮಯವಾದ ನೋಟದಿಂದ ಆ ಹುಡುಗನಿಗೆ ಧೈರ್ಯಬಂದಿತು. ಆಗಳವನು ಮೆಲ್ಲನೆ ಮಾತನಾಡಿದನು. "ಮಹಾರಾಜರೇ, ನಾನು ತಮ್ಮ ಶತ್ರುವಿನ ಮಗನು. ಆದರೆ ಇದೊಂದೇ ಕಾರಣದಿಂದ ನೀವು ನನ್ನನ್ನು ತಿರಸ್ಕರಿಸುವುದಿಲ್ಲವಷ್ಟೇ ! "

ಆ ಹುಡುಗನ ಸ್ವರವು ಒಳ್ಳೆಯ ಮಂಜುಲವಾಗಿತ್ತು. ಆ ಮಂಜುಲವಾಕ್ಯಾವಲಿಯ ಒಂದೇ ಒಂದು ಶಬ್ದದಿಂದ ಎಲ್ಲರೂ ಬೆದರಿದರು. ಆಗ ಶಿವಾಜಿಯು ಶಾಂತಸ್ವರದಿಂದ ನುಡಿದನು. "ಮಗೂ, ಬೆದರಬೇಡ. ನಿನ್ನ ತಂದೆಗೂ ನನಗೂ ಶತ್ರುತ್ವವಿದ್ದರೂ ಇರಲಿ. ನೀನು ಇಷ್ಟೊಂದು ವಿಶ್ವಾಸದಿಂದ ನನ್ನ ಹತ್ತಿರ ಬಂದಿರುವೆಯಾದುದರಿಂದ ನಿನ್ನನ್ನು ಸಂರಕ್ಷಣೆ ಮಾಡುವುದು ನನ್ನ ಕರ್ತವ್ಯವೆಂದು ತಿಳಿಯುತ್ತೇನೆ. ನಿನ್ನಂತಹ ಸುಕುಮಾರನನ್ನು ಆರು ತಿರಸ್ಕರಿಸುವರು ! ತಂದೆಯು ಅಪರಾಧಕ್ಕೋಸುಗ ನಿರಪರಾಧಿಯಾದ ಮಗನಿಗೆ ಶಿಕ್ಷೆಯನ್ನು ವಿಧಿಸುವ ನೀತಿಯನ್ನು ಶಿವಾಜಿ ಭೋಸಲೆಗೆ ಯಾರೂ ಕಲಿಸಿಲ್ಲ. ನೀನು ನಿಃಶಂಕೆಯಿಂದ ನಿನ್ನ ವೃತ್ತಾಂತವನ್ನು ಹೇಳು. ನೀನು ಆಶ್ರಯವನ್ನು ಬಯಸುತ್ತಿದ್ದರೆ ಅವಶ್ಯವಾಗಿ ನಮ್ಮಲ್ಲಿಯೇ ಇರು. ನಿನಗೆ ಯಾವದೊಂದು ತರದ ಸಹಾಯ್ಯವು ಬೇಕಾಗಿದ್ದರೂ ಹೇಳು. ಅದನ್ನು ಒದಗಿಸಿಕೊಡುತ್ತೇನೆ. ಆದರೆ ಆ ಸಹಾಯ್ಯವನ್ನು ನೀನು ನಮ್ಮ ಪಕ್ಷದ ದೃಷ್ಟಿಯಿಂದ ದುರುಪಯೋಗಮಾಡಿಕೊಳ್ಳಲಿಕ್ಕಿಲ್ಲವೆಂಬ ವಿಷಯವಾಗಿ ನಮಗೆ ಮನವರಿಕೆ ಮಾಡಿಕೊಡಬೇಕು. "

ಈ ಪ್ರಕಾರದ ಅಭಯವಚನವನ್ನು ಕೇಳಿದ ಬಳಿಕಂತೂ ಆ ಹುಡುಗನಿಗೆ ಹೆಚ್ಚಾಗಿ ಧೈರ್ಯಬಂದಿತು. ಆಗ ಅವನು ಇಂತು ಮಾತನಾಡಿದನು. " ಮಹಾರಾಜರೇ, ನನ್ನ ಹೆಸರು ಮಹಾದಾಜಿಯು. ನಾನು ಪ್ರಸಿದ್ಧವಾದ ನಿಂಬಾಳಕರರ ವಂಶದಲ್ಲಿ ಹುಟ್ಟಿದ್ದರೂ ಸಮಾಜದ ದೃಷ್ಟಿಯಿಂದ ಪತಿತನಾಗಿದ್ದೇನೆ. ಯಾಕಂ

ದರೆ ನನ್ನ ತಂದೆಯು ಮುಸಲ್ಮಾನನಾಗಿದ್ದಾನೆ. ಹಿಂದೂ ಧರ್ಮವನ್ನು ತಿರಸ್ಕರಿಸಿ ಆತನು ಮುಸಲ್ಮಾನಧರ್ಮದ ದೀಕ್ಷೆಯನ್ನು ತೆಗೆದುಕೊಂಡನು. ತನ್ನ ಧರ್ಮದ ಬಂಧುಬಾಂಧವರನ್ನು ಬದಿಗೊತ್ತಿ ಒಬ್ಬ ಮುಸಲ್ಮಾನ ಕನ್ನಿಕೆಯೊಡನೆ ವಿವಾಹ ಮಾಡಿಕೊಂಡನು. ಈಗಂತೂ ಐಶ್ವರ್ಯದ ಆಸೆಯಿಂದ ಹಿಂದೂಧರ್ಮವನ್ನು ನಾಶಮಾಡುವುದಕ್ಕಾಗಿ ಹಿಂದುಸ್ಥಾನದ ಸ್ವರಾಜ್ಯಸಂಸ್ಥಾಪಕರ ಮೇಲೆಯೇ ಆತನು ದಂಡೆತ್ತಿ ಬಂದಿರುವನು."

ಶಿವಾಜಿಯು ಉತ್ಸುಕತೆಯಿಂದ ಮಾತನಾಡಿದನು:— "ನೀನು ಹೇಳುವುದು ನಿಜವೇ ? ಹಾಗಾದರೆ ನೀನು ಬಜಾಜೀ ನಿಂಬಾಳಕರನ ಮಗನೇನು ? "

ಆ ಹುಡುಗನು ಅಧಿಕವಾಗಿ ನಾಚಿಕೊಂಡು ಮಾತನಾಡಿದನು:—"ಅಹುದು ಮಹಾರಾಜರೇ, ನಾನು ಆ ಅಧಮಾಧಮನಾದ ಬಜಾಜೀಖಾನನ ಮಗನು! ಮಹಾರಾಜರೇ, ಜನ್ಮವು ನನ್ನ ಸ್ವಾಧೀನವಲ್ಲದಿದ್ದರೂ ಕರ್ತೃತ್ವಶಕ್ತಿಯು ನನ್ನ ವಶದಲ್ಲಿದೆ. ಹಿಂದೂಧರ್ಮವನ್ನು ಉದ್ಧಾರಮಾಡಲು ತಾವು ಕಂಕಣಬದ್ಧರಾಗಿರುವಿರಿ. ಆ ಕೆಲಸದಲ್ಲಿ ನಿಂಬಾಳಕರನ ಮನೆತನದವರಿಂದ ನಿಮಗೆ ಸಾಹಾಯ್ಯವಾಗುವದಿಲ್ಲ; ಇಷ್ಟೇ ಅಲ್ಲ; ಆ ನಿಂಬಾಳಕರ ಮನೆತನದ ಮುಖ್ಯಪುರುಷನು ಹಿಂದೂಧರ್ಮಕ್ಕೂ ಹಿಂದುಸ್ಥಾನದ ಸ್ವರಾಜ್ಯಕ್ಕೂ ವಿಘ್ನವನ್ನುಂಟುಮಾಡಲು ಸಿದ್ಧನಾಗಿರುವುದನ್ನು ನೋಡಿ ನನ್ನ ಎದೆಯೊಡೆದು ನೀರಾಗಿದೆ. ತಂದೆಯ ಪಾಪಕ್ಕೋಸ್ಕರ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಲು ಈ ಮಗನು ಸಿದ್ಧನಾಗಿದ್ದಾನೆ. ನಿಂಬಾಳಕರರ ಕುಲಕ್ಕೆ ತಗಲಿದ ಕಲಂಕವನ್ನು ದೂರಮಾಡಬೇಕೆಂದು ನಾನು ನಿಶ್ಚಯಿಸಿದ್ದೇನೆ. ಆ ಕೆಲಸವನ್ನು ಹೇಗೆ ಪರಿಪೂರ್ಣಗೊಳಿಸುವೆನೆಂಬ ವಿವೇಚನೆಯಲ್ಲಿಯೇ ನಾನು ಇದ್ದೇನೆ. ನನ್ನ ಪ್ರಾಣವು ಹೋದರೂ ಚಿಂತೆಯಿಲ್ಲ; ತಮ್ಮ ಸೇವೆಯನ್ನು ಮಾಡಿ ನಿಂಬಾಳಕರರ ಕುಲಕ್ಕೆ ಬಂದ ಪಾಪವನ್ನು ಕ್ಷಾಲನಮಾಡುವ ಸಂಕಲ್ಪ ಮಾಡಿ, ನಾನು ತಮ್ಮ ಪಾದಸನ್ನಿಧಿಗೆ ಬಂದಿದ್ದೇನೆ. ಕುಡುಗೋಲೂ ಕುಂಬಳಕಾಯಿಯೂ ನಿಮ್ಮ ಕೈಯಲ್ಲಿಯೇ ಇವೆ. ನಿಮ್ಮ ಇಷ್ಟಾನುಸಾರ ಮಾಡಿರಿ."

ಶಿವಾಜಿಯು ಆನಂದದಿಂದ ಮಾತಾಡಿದನು. "ನೀನು ನಮ್ಮ ಆಪ್ತನು, ಎರಡನೆಯವನಲ್ಲ; ನೀನು ಇನ್ನೂ ಚಿಕ್ಕವನಾಗಿದ್ದರೂ ನಿಜವಾದ ನಿಂಬಾಳಕರನಾಗಿರುತ್ತೀ. ನೀನು ಬಂದುದರಿಂದ ನನಗಾದ ಆನಂದವನ್ನೇನು ಹೇಳಲಿ ! ನಿಂಬಾಳಕರನ ಸಾಹಾಯ್ಯವು ಸಿಕ್ಕರೆ, ನನ್ನ ಹೇತುವು ಸುಲಭವಾಗಿಯೂ ಶೀಘ್ರವಾಗಿಯೂ ಸಾಧ್ಯವಾಗುವದು. ಈ ಕೆಲಸಕ್ಕೆ ನೀನಂತೂ ನಿಶ್ಚಯಮಾಡಿರುವೆ

ಯಷ್ಟೇ ? ಸ್ವರಾಜ್ಯವ್ರತವು ಸುಲಭವಾದುದಲ್ಲ; ಆ ವ್ರತದ ದೀಕ್ಷೆಯನ್ನು ತೆಗೆದು ಕೊಳ್ಳುವವರಿಗೆ ಮನೆಯಲ್ಲಿ ಕುಳಿತು ಹಾಲು ಅನ್ನವನ್ನು ಮೆಲ್ಲಲು ಅವಕಾಶ ಸಿಕ್ಕುವದಿಲ್ಲ; ಮಾನಮರ್ಯಾದೆಗಳು ಅವರಿಗೆ ಸಿಕ್ಕುವದಿಲ್ಲ; ಪ್ರಸಂಗವಿಶೇಷ ದಲ್ಲಿ ಸೆರೆಮನೆಯಲ್ಲಿ ಬೀಳುವದೂ, ಇತರಸಂಕಟಗಳಿಗೆ ಒಳಗಾಗುವದೂ ಅವರಿಗೆ ಸಾಮಾನ್ಯಸಂಗತಿಗಳು; ಈ ವ್ರತವನ್ನು ಪಾಲಿಸುವವರಿಗೆ ಇಡೀ ಆಯುಷ್ಯದಲ್ಲಿ ಸೌಖ್ಯವೇ ದೊರೆಯುವದಿಲ್ಲ. ಆದರೆ ಅವರ ಕೆಲಸಗಳೆಲ್ಲವೂ ದೇವರಿಗೆ ಮಾತ್ರ ಗೊತ್ತಿರುತ್ತವೆ; ಅವುಗಳ ಫಲವು ಅವರಿಗೆ ಪರಲೋಕದಲ್ಲಿ ದೊರೆಯುವದು; ಜನಸಮಾಜವು ಅವರನ್ನು ದೇವಾಂಶಸಂಭೂತರೆಂದು ತಿಳಿಯುವದು. ಮುಸ ಲ್ಮಾನರು ಬಂಡುಗಾರರೆಂದು ಅವರನ್ನು ಕರೆದರೂ, ಜನರು ದೇವರೆಂದು ತಿಳಿದು ಪೂಜೆಮಾಡುವರು. ಅವರಿಗೆ ಸೌಖ್ಯವೆಂದರೆ ಇದೇ ! ಪ್ರಾಪಂಚಿಕವಾದ ಇತರ ಯಾವ ಸುಖಗಳೂ ಅವರಿಗೆ ಬಹುತರವಾಗಿ ದೊರೆಯುವದಿಲ್ಲ. ನಿನ್ನ ಮೇಲೆಯೋ ಅತ್ಯಂತಕಠಿನಪ್ರಸಂಗವೇ ಬಂದಿದೆ; ಸ್ವರಾಜ್ಯವಾದಿಗಳ ಪಕ್ಷವನ್ನು ವಹಿಸಿದ ಕೂಡಲೇ, ಮೊದಲು ನಿನ್ನ ತಂದೆಯೊಡನೆ ನೀನು ಕಾದಬೇಕಾಗುವದು. ಯಾಕಂ ದರೆ, ಬಜಾಜೀಖಾನನನ್ನು ಗೆಲ್ಲುವದೇ ಸ್ವರಾಜ್ಯವಾದಿಗಳಿಗೆ ಈಗಿನ ಮೊದಲ ನೆಯ ಕರ್ತವ್ಯಕರ್ಮವಾಗಿದೆ. ಆದುದರಿಂದ ನೀನು ಚೆನ್ನಾಗಿ ವಿಚಾರಮಾಡು. ಈ ವ್ರತವನ್ನು ಸ್ವೀಕರಿಸಿದ ಅನಂತರ ಸ್ವಸುಖವನ್ನೂ ಸ್ವಹಿತಸಂಬಂಧವನ್ನೂ ಮರೆತುಬಿಡಬೇಕಾಗುತ್ತದೆ. ಸ್ವರಾಜ್ಯದ ಶತ್ರುಗಳೇ ನಮ್ಮ ಶತ್ರುಗಳು; ಸ್ವರಾ ಜ್ಯದ ಮಿತ್ರರೇ ನಮ್ಮ ಮಿತ್ರರು; ಎಂಬ ಭಾವನೆಯನ್ನು ಯಾವಾಗಲೂ ಮನಸ್ಸಿ ನಲ್ಲಿ ಇಟ್ಟಿರಬೇಕು. ಆದುದರಿಂದಲೇ ಈ ವ್ರತವು ಕಠಿಣವಾಗಿದೆ. ಈ ಮಾತನ್ನು ಲಕ್ಷ್ಯದಲ್ಲಿ ತಂದುಕೋ; ಆ ಮೇಲೆ ಶಿವಾಜಿಯ ಸಮೂಹದಲ್ಲಿ ಸಮಾವಿಷ್ಟ ನಾಗು. ಅವಿಚಾರದಿಂದ ಯಾವ ಕೆಲಸವನ್ನೂ ಮಾಡಬೇಡ. ನೀನು ನಮ್ಮನ್ನು ಕೂಡಿದರೆ ಅದು ನಮಗೆ ಇಷ್ಟವೇ; ಅದರಿಂದ ನಮಗೆ ಆನಂದವೇ ಆಗುವದು ! ಆದರೆ ಚಿಕ್ಕ ಹುಡುಗನನ್ನು ಮೋಸಗೊಳಿಸಿ ಕಪಟದಿಂದ ಶಿವಾಜಿಯು ತನ್ನ ಪಕ್ಷ ದಲ್ಲಿ ನಿನ್ನನ್ನು ಸೇರಿಸಿಕೊಂಡನೆಂದು ಮುಂದೆ ಜನರು ಅನ್ನಬಾರದೆಂಬ ಉದ್ದೇಶ ದಿಂದ ಸಾಧಕಬಾಧಕಸಂಗತಿಗಳನ್ನು ನಿನಗೆ ಹೇಳಿದ್ದೇನೆ; ಆಲೋಚಿಸು. ”

ಶಿವಾಜಿಯ ಪಾದಗಳ ಮೇಲೆ ಮಸ್ತಕವನ್ನಿಟ್ಟು ಮಹಾದಾಜಿಯು ಮಾತ ನಾಡಿದನು:—“ಈ ಸಂಗತಿಗಳೆಲ್ಲವನ್ನೂ ವಿಚಾರಮಾಡಿಯೇ ನಾನು ತಮ್ಮ ಚರಣ ಸನ್ನಿಧಿಗೆ ಬಂದಿದ್ದೇನೆ. ನಿಂಬಾಳಕರನ ಮನೆತನವೆಷ್ಟು ದೊಡ್ಡದು ! ಅವರಿಗೆ

ಸಮಾಜದಲ್ಲಿ ಮಾನಮರ್ಯಾದೆಗಳೆಷ್ಟು ! ಹೀಗಿದ್ದು ಈಗಿನ ನಮ್ಮ ಸ್ಥಿತಿಯು ಎಂತಹುದು ! ಈ ಪ್ರಕಾರದ ಜೀವನವು ವ್ಯರ್ಥವೇ ಸರಿ !! ಆದುದರಿಂದ ನನ್ನ ಆಯುಷ್ಯವನ್ನು ಸತ್ಕರ್ಮದಲ್ಲಿ ಖರ್ಚುಮಾಡುವುದಕ್ಕೋಸ್ಕರ ನಾನು ಸಿದ್ಧನಾಗಿದ್ದೇನೆ. ಅದರಿಂದ ನಮ್ಮ ಮನೆತನದ ಮಾನವು ಅಭಿವೃದ್ಧವಾದೀತು. ನನ್ನ ತಂದೆಯು ಮಾಡಿದ ಆ ಘೋರಪಾತಕಕ್ಕಾಗಿ ನಾನು ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳುವೆನು. ಈಗ ನಮ್ಮನ್ನು ನಾವು ಮರಾಟರೆಂದು ತಿಳಿಯುತ್ತಿದ್ದರೂ ಸಮಾಜದ ದೃಷ್ಟಿಯಿಂದ ನಾನು ಪತಿತನೇ ! ಮುಸಲ್ಮಾನನ ಮಗನನ್ನು ಮರಾಟನೆಂದು ಯಾರಾದರೂ ಕರೆಯಬಹುದೇ? ತಮ್ಮ ಸೇವೆಯಲ್ಲಿಯೇ ನನ್ನ ಪ್ರಾಣವು ಹೋದರೂ ಚಿಂತೆಯಿಲ್ಲ; ಬಜಾಜಿಯು ಭ್ರಷ್ಟನಾದರೂ ಆತನ ಮಗನು ಹಿಂದೂ ಧರ್ಮದ ಸಂರಕ್ಷಣಾರ್ಥವಾಗಿ ಆತ್ಮಯಜ್ಞಮಾಡಿದನೆಂದು ಜನರಾದರೂ ಅನ್ನುವರು. ಮಹಾರಾಜರೇ, ಇದೇ ಯುದ್ಧದಲ್ಲಿಯೇ ನನ್ನನ್ನು ಪರೀಕ್ಷಿಸಿರಿ. ನನ್ನ ಹಡೆದ ತಂದೆಯೊಡನೆ ಯುದ್ಧಮಾಡಿ ಆತನ ತಲೆಯನ್ನು ಕೊಯ್ದು ತರಲು ನನಗೆ ಅಪ್ಪಣೆಕೊಡಿರಿ. ಅದಕ್ಕೆ ನಾನು ತಪ್ಪಿದೆನಾದರೆ, ನನ್ನನ್ನು ತುಂಡುತುಂಡಾಗಿ ಕತ್ತರಿಸಿರಿ. ತಂದೆಯ ಸಂಗಡ ಹೋರಾಡಬೇಕಾದ ಪ್ರಸಂಗವು ಹಿಂದೆ ಯಾವ ಮಗನಿಗೂ ಬಂದಿಲ್ಲವೆಂಬಂತೇನೂ ಇಲ್ಲ. ಬಭ್ರುವಾಹನನು ಅರ್ಜುನನೊಡನೆ ಯುದ್ಧಮಾಡಲಿಲ್ಲವೇ? ಮಹಾರಾಜರೇ, ನನ್ನನ್ನು ನಿಶ್ಚಯವಾಗಿಯೂ ಪರೀಕ್ಷಿಸಿರಿ. ತಾವು ನನಗೆ ಕರ್ತವ್ಯವನ್ನು ಆಜ್ಞಾಪಿಸಿದ ಹೊರತು, ಒಂದು ತುತ್ತು ಅನ್ನವನ್ನು ಕೂಡ ನಾನು ಮುಟ್ಟುವದಿಲ್ಲ; ಇದೇ ನನ್ನ ನಿಶ್ಚಯವು ! ಆ ಕರ್ತವ್ಯವು ಎಷ್ಟೇ ಕಠಿನವಾಗಿದ್ದರೂ ಅದನ್ನು ಕೊನೆಗಾಣಿಸುವೆನು; ಇಲ್ಲವೆ ಅದಕ್ಕೆ ನೆರವಾಗುವೆನು. ಆದರೆ ಕರ್ತವ್ಯದ ಅಪ್ಪಣೆಯನ್ನು ಹೊತ್ತುಕೊಂಡ ಹೊರತು ನಾನು ತಮ್ಮನ್ನಗಲಿ ಹೋಗಲಾರೆನು. ,, ಮಾತನಾಡುತ್ತಾಡುತ್ತ ಮಹಾದಾಜಿಯ ಕುತ್ತಿಗೆಯ ನರಗಳು ಉಬ್ಬಿದುವು.

ಶಿವಾಜಿಯು ಆತನ ಮನಸ್ಸನ್ನು ತಿರುಗಿಸುವ ಉದ್ದೇಶದಿಂದ ಮಾತನಾಡಿದನು. "ನೀನು ಇನ್ನೂ ಚಿಕ್ಕವನಾಗಿರುತ್ತೀ. ಕೆಲವು ದಿವಸಗಳ ವರೆಗೆ ನಮ್ಮ ಹತ್ತರವೇ ಇರು. ದೊಡ್ಡವನಾದೆಯೆಂದರೆ ನಿನ್ನನ್ನು ಯಾವದಾದರೊಂದು ಕೆಲಸಕ್ಕೆ ನೇಮಿಸುತ್ತೇನೆ. " ಈ ಪ್ರಕಾರ ಮಹಾದಾಜಿಗೆ ತಿಳಿವಳಿಕೆ ಹೇಳುವದಕ್ಕಾಗಿ ಶಿವಾಜಿಯು ಎಷ್ಟೋ ಪ್ರಯತ್ನಮಾಡಿದನು. ಆದರೆ ಮಹಾದಾಜಿಯ ಧೈರ್ಯವೂ ಸಂಕಲ್ಪವೂ ಸ್ಖಲಿತವಾಗಲಿಲ್ಲ. ಆತನು ಲವಕುಶರ ದೃಷ್ಟಾಂತಗಳನ್ನು ಹೇಳಿ,

"ನಾನು ಚಿಕ್ಕವನಾಗಿದ್ದರೂ ನಿಂಬಾಳಕರನ ಕುಲದಲ್ಲಿ ಹುಟ್ಟಿದ್ದೇನೆ. ನನ್ನ ಕರ್ತೃತ್ವಶಕ್ತಿಯನ್ನಿಷ್ಟು ನೋಡಿರಿ; ಕೇವಲ ನನ್ನ ವಯಸ್ಸನ್ನೇ ನಿರೀಕ್ಷಿಸಬೇಡಿರಿ." ಎಂದು ಉತ್ತರವಿತ್ತನು.

ತಾನಾಜಿ ಮತ್ತು ಏಸಾಜಿಯೊಡನೆ ಶಿವಾಜಿಯು ಕೆಲಹೊತ್ತು ವಿಚಾರ ಮಾಡಿದನು. ಬಜಾಜೀಖಾನನ ವೃತ್ತಾಂತವನ್ನು ತಿಳಿದುಕೊಳ್ಳುವದಕ್ಕಾಗಿ ಆರನ್ನಾದರೂ ನಿಯಮಿಸುವದೂ ಅವಶ್ಯವಾಗಿತ್ತು. ಆದುದರಿಂದ ತಾನಾಜಿಯೂ ಮಹಾದಾಜಿಯೂ ತಮ್ಮ ವೇಷವನ್ನು ಬದಲಾಯಿಸಿಕೊಂಡು ಬಜಾಜೀಖಾನನ ಶಿಬಿರಕ್ಕೆ ಹೋಗಿ ಖಾನನ ಸೈನ್ಯ, ಅಲ್ಲಿಯ ವ್ಯವಸ್ಥೆ, ದಂಡಾಳುಗಳ ಸಂಖ್ಯೆ, ಅಫ್ಝುಲ್‌ಖಾನನ ಮತ್ತು ಬಜಾಜೀಖಾನರ ರಹಸ್ಯ ಈ ಮೊದಲಾದ ಸಂಗತಿಗಳನ್ನು ತಿಳಿದುಕೊಳ್ಳತಕ್ಕದ್ದೆಂದು ಸರ್ವಾನುಮತದಿಂದ ನಿಶ್ಚಯವಾಯಿತು. ಬಜಾಜೀಖಾನನ ಪ್ರೀತಿಯು ಮುಸಲ್ಮಾನ ಧರ್ಮದಮೇಲೆ ಎಷ್ಟಿದೆ! ರೋಷನಬೇಗಮಳು ಆತನ ಮೇಲೆ ತನ್ನ ವರ್ಚಸ್ಸನ್ನು ಎಷ್ಟು ಮಟ್ಟಿಗೆ ಕುಳ್ಳಿರಿಸಿದ್ದಾಳೆ! ಈ ಸಂಗತಿಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂದು ಶಿವಾಜೀಮಹಾರಾಜನು ಇಬ್ಬರಿಗೂ ಮತ್ತೆ ಮತ್ತೆ ಸೂಚನೆಮಾಡಿದನು. ಶತ್ರುಗಳ ಗುಂಪಿನಲ್ಲಿ ಭೇದವನ್ನು ಹೇಗೆ ಉತ್ಪನ್ನ ಮಾಡಬೇಕು ? ಅವರಲ್ಲಿರುವ ಹುಳುಕನ್ನು ತಿಳಿದು ಅದಕ್ಕೆ ಯೋಗ್ಯೋಪಾಯವನ್ನು ಹೇಗೆ ಯೋಚಿಸಬೇಕು ? ಈ ಸಂಗತಿಗಳೆಲ್ಲವೂ ತಾನಾಜಿಗೆ ಚೆನ್ನಾಗಿ ಗೊತ್ತಿದ್ದುವು. ಬಜಾಜಿಗೂ ಅಫ್ಝುಲ್‌ಖಾನನಿಗೂ ಸಖ್ಯವಿಲ್ಲದಿದ್ದರೆ ನಮ್ಮ ಕಾರ್ಯವು ತ್ವರಿತವಾಗಿಯೇ ಆಗುವುದೆಂದು ಎಲ್ಲರೂ ತಿಳಿದಿದ್ದರು. ಈ ರೀತಿಯಾಗಿ ಮಾಡತಕ್ಕ ಸೂಚನೆಗಳೆಲ್ಲವನ್ನೂ ಮಾಡಿ ಶಿವಾಜಿಯು ತನ್ನ ಅವ್ವನ ಕಡೆಗೆ ಹೊರಟು ಹೋದನು

ಜಿಜಾಬಾಯಿಯ ಹತ್ತರಹೋಗಿ ಶಿವಾಜಿಯು ತಾನು ಮಾಡಿದ ಯೋಚನೆಯನ್ನು ಹೇಳುತ್ತಿದ್ದನು. ಅನುಕೂಲವಾದರೆ ಬಜಾಜಿಯನ್ನು ತಮ್ಮ ಪಕ್ಷಕ್ಕೆ ಒಲಿಸಿಕೊಂಡು ಅಫ್ಝುಲ್‌ಖಾನನ ಸೊಕ್ಕನ್ನು ಇಳಿಸಬೇಕೆಂಬುದೇ ಶಿವಾಜಿಯ ಯೋಚನೆಯಾಗಿತ್ತು. ವಿಜಾಪುರದ ದರಬಾರದಲ್ಲಿ ಬಜಾಜಿಯ ಗೌರವವು ಬೆಳೆಯುತ್ತ ನಡೆದಿತ್ತು; ಅದು ಕೆಲವು ಮುಸಲ್ಮಾನಸರದಾರರಿಗೆ ಸಹನವಾಗಲಿಲ್ಲ; ಅದರಿಂದ ಅವರು ಬಜಾಜಿಯ ವಿಷಯವಾಗಿ ಬಾದಶಹನ ಕಿವಿಯಲ್ಲಿ ಇಲ್ಲದ ಸಲ್ಲದ ಒಂದೆರಡು ಮಾತುಗಳನ್ನು ಹೇಳಿದರು; ಆದುದರಿಂದಲೇ ಬಜಾಜಿಯ ಮೇಲೆ ಅಫ್ಝುಲ್‌ಖಾನನನ್ನು ಬಾದಶಹನು ಕಳಿಸಿಕೊಟ್ಟನು; ಇವರಿ

ಬ್ಬರಿಗೂ ದಾರಿಯಲ್ಲಿ ಆಗಾಗ ಹೊಡೆದಾಟಗಳಾಗುತ್ತಿರುತ್ತವೆ. ಈ ಮೊದಲಾದ ಸಂಗತಿಗಳು ಕರ್ಣೋಪಕರ್ಣವಾಗಿ ಶಿವಾಜಿಗೆ ತಿಳಿದಿದ್ದುವು. ಅವೆಲ್ಲವನ್ನೂ ಆತನು ತನ್ನ ತಾಯಿಗೆ ಹೇಳಿದನು.

ಬಜಾಜೀಖಾನನು ರೋಷನಬೇಗಮಳಿಗೆ ಪೂರ್ಣವಾಗಿ ಅಧೀನನಾಗಿರುವ ನೆಂಬ ಸಂಗತಿಯು ಜಿಜಾಬಾಯಿಗೆ ಗೊತ್ತಿತ್ತು. ಆದುದರಿಂದ ಅವಳ ವಿಷಯ ವಾಗಿ ಜಿಜಾಬಾಯಿಯು ಶಿವಾಜಿಗೆ ಒಂದೆರಡು ಪ್ರಶ್ನೆಗಳನ್ನು ಕೇಳಿದಳು. ಆಗ ಶಿವಾಜಿಯು ಹೇಳಿದುದೇನಂದರೆ—“ ಅವ್ವಾ, ರೋಷನಬೇಗಮಳ ಬಲೆಯೊಳ ಗಿಂದ ಬಜಾಜಿಯನ್ನು ಬಿಡಿಸುವದಕ್ಕಾಗಿ ಪರಮೇಶ್ವರನು ಇಂದೇ ನನಗೊಬ್ಬ ಸಹಾಯಕನನ್ನು ಕಳಿಸಿಕೊಟ್ಟಿದ್ದಾನೆ!” ಜಿಜಾಬಾಯಿಯು ಆ ಸಂಗತಿಯನ್ನು ತಿಳಿದುಕೊಳ್ಳುವ ಕುತೂಹಲವನ್ನು ವ್ಯಕ್ತಮಾಡಲು, ಮಹಾದಾಜಿಯ ವೃತಾಂ ತವನ್ನೆಲ್ಲ ಮೆಲ್ಲನೆ ಶಿವಾಜಿಯು ತಾಯಿಯ ಕಿವಿಯಲ್ಲಿ ಹೇಳಿದನು. ಗುಪ್ತಚಾರ ನಂತೆ ಮಹಾದಾಜಿಯನ್ನು ಬಜಾಜಿಯ ಶಿಬಿರಕ್ಕೆ ಕಳಿಸಿಕೊಡುತ್ತೇನೆಂದು ಶಿವಾ ಜಿಯು ತಾಯಿಗೆ ಅರಿಕೆಮಾಡಿಕೊಂಡನು. “ ಹೊಟ್ಟೆಯ ಮಗನು ಎದುರಿಗೆ ನಿಂತುಕೊಂಡರೆ ಬಜಾಜಿಯ ಮನಸ್ಸು ತಿರುಗಬಹುದು; ಅವನು ಪೂರ್ಣವಾಗಿ ನಮ್ಮ ಪಕ್ಷವನ್ನು ಸೇರದಿದ್ದರೂ ನಿಕೃಷ್ಟಪಕ್ಷಕ್ಕೆ ಈ ಯುದ್ಧದಲ್ಲಿ ಉದಾಸೀನತೆ ಯನ್ನಾದರೂ ವಹಿಸಬಹುದು. ಯಾಕಂದರೆ ಯಾರಿಗೋಸ್ಕರವಾಗಿ ಆತನು ತನ್ನ ಧರ್ಮಕ್ಕೂ ಆಪ್ತೇಷ್ಟರಿಗೂ ತಿಲಾಂಜಲಿಯನ್ನಿತ್ತನೋ, ಆ ಮುಸಲ್ಮಾನರ ಅವಿಶ್ವಾಸದ ವರ್ತನವನ್ನು ನೋಡಿ ಆತನ ಸ್ವಾಭಿಮಾನವು ಕಿಂಚಿತ್ತಾದರೂ ಉಜ್ವ ಲವಾಗಿರಬಹುದು. ಇಂತಹ ಸ್ಥಿತಿಯಲ್ಲಿ ರೋಷನಬೇಗಮಳ ಅಧಿಪತ್ಯವನ್ನು ತನ್ನ ಮೇಲೆ ಆತನು ಮೊದಲಿನಂತೆ ನಡೆಯಗೊಡಲಿಕ್ಕಿಲ್ಲವೆಂದು ಊಹಿಸಬಹುದಾಗಿದೆ.”

**ಜಿಜಾಬಾಯಿ:**—ಏನಾಗುವದೋ ನೋಡೋಣ. ಮುಂದಾದರೂ ಈ ಪ್ರಶ್ನೆಯನ್ನು ಬಿಡಿಸುವುದು ಕಷ್ಟವೇ. ಯಾಕಂದರೆ ಆತನನ್ನು ಹಿಂದೂ ಧರ್ಮದಲ್ಲಿ ತೆಗೆದುಕೊಂಡರೆ ಮಾತ್ರ ಅವನು ನಮ್ಮ ಪಕ್ಷವನ್ನು ವಹಿಸಬಹುದು. ಮುಸಲ್ಮಾನನೇ ಆಗಿದ್ದರೆ ನಮ್ಮ ವಿಷಯದಲ್ಲಿ ಅವನಿಗೆ ಮಹತ್ವವು ಹೇಗೆ ಉಂ ಟಾಗಬೇಕು? ಈಗ ಅವನು ಮುಸಲ್ಮಾನನಾಗಿ ಸುಖದಿಂದಲೇ ಇದ್ದಾನೆ. ಒಂದುವೇಳೆ ಆತನು ನಿಮ್ಮನ್ನು ಕೂಡುವದಕ್ಕೆ ಒಡಂಬಟ್ಟರೂ ಹಾವಿನಂತೆ ಯಾವಕಾಲಕ್ಕೆ ಹಿಂಪಕ್ಕೆ ತಿರುಗುವನೆಂಬ ನಿಯಮವಿಲ್ಲ. ಇನ್ನು ಆತನನ್ನು ಹಿಂದೂಧರ್ಮಕ್ಕೆ ಸೇರಿಸಿಕೊಂಡರೆ ಎಷ್ಟೊಂದು ಅನಾಹುತವಾಗಬಹುದುತ!

ಸಮಾಜದಲ್ಲಿ ವಿಲಕ್ಷಣವಾದ ಕ್ರಾಂತಿಯುಂಟಾದೀತು ! ಇಂದು ನಿನ್ನನ್ನು ಪ್ರೇಮದಿಂದ ಪ್ರಶಂಸಿಸುವ ಜನರೇ ನಾಳೆ ಕ್ರೂರವಾಗಿ ನಿಂದಿಸತೊಡಗುವರು! ಈ ಪ್ರಕಾರವಾಗಿ ಸಮಾಜಗಂಗೆಯು ಪ್ರತಿಕೂಲಳಾದರೆ ನೀನು ಸ್ವರಾಜ್ಯವನ್ನು ಸ್ಥಾಪಿಸುವದೆಂತು ?

**ಶಿವಾಜಿ:**—ಅವ್ವಾ, ನನ್ನ ಉದಾತ್ತಶೀಲವು ಜನರಿಗೆ ತಿಳಿದುಬಂದರೆ ಮಹಾರಾಷ್ಟ್ರರಾಜ್ಯವೆಲ್ಲ ನನ್ನದೇ ಆಗುವದೆಂದು ನೀನು ಈ ಮೊದಲೇ ಹೇಳಿದ ಸ್ಫೂರ್ತಿದಾಯಕವಾದ ನುಡಿಗಳು ಇನ್ನೂ ನನ್ನ ಕಿವಿಯಲ್ಲಿ ಪ್ರತಿಧ್ವನಿಯನ್ನುಂಟುಮಾಡುತ್ತಲಿವೆ. ನನ್ನ ಹೃದಯದಲ್ಲಿ ಅವು ಅಂಕಿತವಾಗಿವೆ; ನನ್ನ ಮನಸ್ಸಿನಲ್ಲಿ ಅವು ಮೂಡಿಹೋಗಿವೆ. ಅವುಗಳ ಆಧಾರದಿಂದಲೇ ನಾನು ಈ ಹಂಚಿಕೆಯನ್ನು ಮಾಡಿದ್ದೇನೆ ಮಹಾದಾಜಿಯೂ ಬಜಾಜಿಯೂ ಹೇಗಿದ್ದರೂ ನಮ್ಮವರೇ ಆಗಿದ್ದಾರೆ.

**ಜಿಜಾಬಾಯಿ:**—ಆದರೆ, ಉದಾರಿಗಳಲ್ಲದವರೂ ಸಂಕುಚಿತಮನಸ್ಕರೂ ಆದ ಜನರು ಹಾಗೆ ತಿಳಿಯಬೇಕಲ್ಲವೇ ? ಶಿವಾಜಿ ಭೋಸಲೆಯು ಸ್ವರಾಜ್ಯದ ಆಡಂಬರದಿಂದ ಹಿಂದೂಧರ್ಮವನ್ನು ಭ್ರಷ್ಟಗೊಳಿಸಲಾರಂಭಿಸಿದನೆಂದು ಅವರು ಅನ್ನಲಿಕ್ಕಿಲ್ಲವೇನು ? ಅದಿರಲಿ. ಮೊದಲು ಬಜಾಜಿಯು ನಮ್ಮ ಪಕ್ಷಕ್ಕೆ ಒಲಿಯುವನೋ ಇಲ್ಲವೋ ಎಂಬದು ಮುಖ್ಯಪ್ರಶ್ನೆಯಾಗಿದೆ. ಆ ಮಹಾದಾಜಿಯನ್ನುನನ್ನ ಕಡೆಗೆ ಏಕೆ ಕರೆದುಕೊಂಡು ಬರಲಿಲ್ಲ? ನಾನು ಅವನನ್ನು ಒಮ್ಮೆ ನೋಡುತ್ತಿದ್ದೆನು.

ಶಿವಾಜಿಯು ಉತ್ತರಕೊಡಬೇಕೆನ್ನುವಷ್ಟರಲ್ಲಿ ಮರಾಟರ ಒಂದು ವಿಲಕ್ಷಣವಾದ ದಾಂಪತ್ಯವು ಒಳಗೆ ಬಂತು. ಗಂಡಹೆಂಡರಿಬ್ಬರೂ ಜಿಜಾಬಾಯಿಯ ಕಾಲ್ಗಳಮೇಲೆ ತಲೆಯನ್ನಿಟ್ಟರು. ಆ ಮರಾಟನು ಒಳ್ಳೆಯ ಧಷ್ಟಪುಷ್ಟನಾಗಿದ್ದು ಆತನ ಹೆಂಡತಿಯು ಮಾತ್ರ ಸುಂದರಿಯೂ ಕೋಮಲೆಯೂ ಆಗಿದ್ದಳು. ಆ ಮರಾಟನ ಉಡುಪು ಒಕ್ಕಲಿಗನಂತೆ ಇದ್ದರೂ ಅವನ ಹೆಂಡತಿಯ ವಸ್ತ್ರಪ್ರಾವರಣಗಳು ಸುಂದರವಾಗಿದ್ದವು.

ಶಿವಾಜಿಯು ಒಂದೇ ಸಮನೆ ನಗಹತ್ತಿದನು. ಅವರಿಬ್ಬರಲ್ಲಿ ಗಂಡಸಾಗಿದ್ದವನೂ ನಗಹತ್ತಿದನು. ಆ ಹೆಂಗಸು ಮಾತ್ರ ಲಜ್ಜಾವತಿಯಾಗಿ ನಿಂತುಕೊಂಡಳು. ಜಿಜಾಬಾಯಿಯು ಚಕಿತಳಾಗಿ ಮಾತನಾಡಹತ್ತಿದಳು. “ಶಿವಬಾ, ಇದೇನು ಚಮತ್ಕಾರವು ? ಇವರು ಯಾರು ?”

ಆ ಮರಾಟನು ನಗುತ್ತ ಮಾತನಾಡಿದನು. “ಅವ್ವನವರೇ, ಈತನು ಮ್ಮ ದಾಸನಾದ ತಾನ್ಹಾ ಮಾಲಸುರೇನಲ್ಲವೆ ?”

ಶಿವಾಜಿಯಾದರೂ ನಗುತ್ತಲೇ ಹೀಗೆ ಹೇಳಿದನು. "ಅವ್ವಾ, ಈತನೇ ಮಹಾದಾಜಿ ನಿಂಬಾಳಕರನು! ಈ ಇಬ್ಬರೂ ಚಾರರು ಬಜಾಜೀಖಾನನ ಶಿಬಿರದಲ್ಲಿ ಗುಪ್ತವೃತ್ತಾಂತವನ್ನು ತಿಳಿಯಲು ಹೊರಟಿದ್ದಾರೆ. ನಿನ್ನ ಆಶೀರ್ವಾದವಿರಲಿ!"

**ಜಿಜಾಬಾಯಿ:**—ಹೋಗಿರಿ. ಮನಃಪೂರ್ವಕವಾಗಿ ನಿಮ್ಮನ್ನು ಆಶೀರ್ವದಿಸುವೆನು. ನಿಮ್ಮ ಕೆಲಸದಲ್ಲಿ ನಿಶ್ಚಯವಾಗಿಯೂ ಯಶಸ್ಸು ಪ್ರಾಪ್ತವಾಗುವುದು. ತಾನಾಜೀ, ನಿನ್ನ ವೇಷವು ಅತ್ಯುತ್ತಮವಾಗಿದೆ. ನನಗೇ ನಿನ್ನ ಪರಿಚಯವು ಹತ್ತಲಿಲ್ಲ; ಅಂದಮೇಲೆ ಮುಸಲ್ಮಾನರು ನಿನ್ನ ಗುರುತು ಹಿಡಿಯುವುದು ದೂರದಲ್ಲಿಯೇ ಉಳಿಯಿತು. ಮಗೂ, ಮಹಾದಾಜೀ, ನಿಂಬಾಳಕರನ ಮನೆತನದೊಳಗಿನ ಹುಡುಗರು ಶೂರರೂ ಧೈರ್ಯವಂತರೂ ಇರುತ್ತಾರೆಂದು ನಾನು ಕೇಳಿದ್ದೆನು; ಆದರೆ ಅವರು ಸುಂದರರರೂ ಆಗಿರುತ್ತಾರೆಂಬುವು ಈ ಹೊತ್ತೇ ತಿಳಿಯಿತು!

ಜಿಜಾಬಾಯಿಯು ಆ ವಿಲಕ್ಷಣದಾಂಪತ್ಯಕ್ಕೆ ಆಶೀರ್ವಾದವನ್ನಿತ್ತು ಕಳಿಸಿಕೊಟ್ಟಳು.

## ಎಂಟನೆಯ ಪ್ರಕರಣ



## ಇವಳು ಯಾರು?







ಬಜಾಜೀಖಾನನಿಗೂ ಅಫ್ಝುಲ್‌ಖಾನನಿಗೂ ದಿನದಿನಕ್ಕೆ ವೈಮನಸ್ಯವು ಬೆಳೆಯುತ್ತಲೇ ಇತ್ತು. ಬಜಾಜೀಖಾನನಂತಹ ಜಾತಿಭ್ರಷ್ಟನು ನಿಜವಾದ ಮುಸಲ್ಮಾನರಾದ ನಮಗೆ ಕಃಪದಾರ್ಥವಾಗಿದ್ದಾನೆಂಬುದನ್ನು ಸರ್ವರಿಗೂ ವಿದಿತಪಡಿಸುವುದೇ ಅಫ್ಝುಲ್‌ಖಾನನ ಉದ್ದೇಶವಾಗಿತ್ತು. ಅಲ್ಲದೆ, ಅವರಿಬ್ಬರ ಸ್ವಭಾವವು ಪರಸ್ಪರ ಭಿನ್ನವಾಗಿತ್ತು. ಒಬ್ಬನು ಶಾಂತನು; ಇನ್ನೊಬ್ಬನು ರಾಕ್ಷಸವೃತ್ತಿಯವನು. ಒಬ್ಬನು ಸಾಮದಾನೋಪಾಯಗಳನ್ನು ಅವಲಂಬಿಸುವವನು; ಇನ್ನೊಬ್ಬನು ಕತ್ತಿಯ ಶಕ್ತಿಯನ್ನು ಆಶ್ರ

ಯಿಸುವವನು. ಒಬ್ಬನು ಸಮಯವನ್ನು ನೋಡಿಕೊಂಡು ಕೆಲಸವನ್ನು ಸಾಧಿಸಿಕೊಳ್ಳುವ ಸ್ವಭಾವವುಳ್ಳವನು; ಇನ್ನೊಬ್ಬನು ರಕ್ತವನ್ನು ಹೀರುವುದಕ್ಕೆ ಉತ್ಸುಕವಾದ ಹುಲಿಯಂತೆ ಆತುರಬಡುವವನು ! ಅಂದಮೇಲೆ ಈ ಇಬ್ಬರೂ ಮುತ್ಸದ್ದಿಗಳಲ್ಲಿ ಐಕಮತ್ಯವು ಹೇಗೆ ಉತ್ಪನ್ನವಾಗಬೇಕು ? ಈ ಸೇನಾಪತಿಗಳಿಬ್ಬರೂ ಒಂದೇ ಕಡೆಯಲ್ಲಿ ತಳವೂರಿ ನಿಲ್ಲುವುದಾದರೂ ಹೇಗೆ ?

ಅಫ್‌ಝುಲ್‌ಖಾನನ ವರ್ತನವನ್ನು ಕುರಿತು ಬಜಾಜೀಖಾನನು ವಿಜಾಪುರದ ದರಬಾರಕ್ಕೆ ತಿಳಿಸಿನೋಡಿದನು. ಆತನ ನಿರ್ದಾಕ್ಷಿಣ್ಯದ ನಡೆವಳಿಕೆಯಿಂದ ಸೈನ್ಯದ ವ್ಯವಸ್ಥೆಯೆಲ್ಲ ಕೆಟ್ಟುಹೋಗಿದೆಯೆಂದೂ ಬರೆದನು. ಆದರೆ ದರಬಾರದವರು ಈ ಸಂಗತಿಯನ್ನು ನಿಜವೆಂದು ನಂಬಲಿಲ್ಲ. ಇಷ್ಟೇ ಅಲ್ಲ ; ಬಾದಶಹನು ಬಜಾಜಿಯ ಪತ್ರಗಳನ್ನು ನೋಡಿಕೊಂಡು, ಅವಕ್ಕೆ ಉತ್ತರವಾಗಿ ಕೆಳಗಿನ ಅಭಿಪ್ರಾಯದ ಪತ್ರವನ್ನು ಆತನಿಗೆ ಕಳಿಸಿಕೊಟ್ಟನು:—

“ ಈ ಯುದ್ಧವನ್ನು ಕೊನೆಗಾಣಿಸುವ ಸಾಮರ್ಥ್ಯವು ನಿಮ್ಮಲ್ಲಿಲ್ಲದಿದ್ದರೆ ನಾವು ನಿಮ್ಮ ಸ್ಥಳದಲ್ಲಿ ಇನ್ನೊಬ್ಬ ಸೇನಾಪತಿಯನ್ನು ನಿಯಮಿಸುತ್ತೇವೆ. ಅಫ್‌ಝುಲ್‌ಖಾನನಿಗೂ ನಿಮಗೂ ಯಾವ ತರದ ಸಂಬಂಧವೂ ಇಲ್ಲ. ಹೀಗಿದ್ದು ಅವನಿಂದ ಸೈನ್ಯದ ವ್ಯವಸ್ಥೆಯು ಕೆಟ್ಟು ಹೋಗಿದೆಯೆಂದು ನೀವು ಬರೆದುದನ್ನು ನೋಡಿ ಆಶ್ಚರ್ಯವಾಗುತ್ತದೆ ! ಆತನು ತನ್ನ ಸೈನ್ಯಕ್ಕೆ ತಾನು ಅಧಿಪತಿಯಾಗಿದ್ದಾನೆ. ನೀವು ನಿಮ್ಮ ಸೈನ್ಯದ ವ್ಯವಸ್ಥೆಯನ್ನು ಮಾತ್ರ ನೋಡಿಕೊಂಡರೆ ಸಾಕು. ಅವನ ಕೆಲಸದಲ್ಲಿ ನಿರರ್ಥಕವಾಗಿ ಕಯ್ ಹಾಕಿ ಅಧಿಕಪ್ರಸಂಗಿತ್ವವನ್ನು ತೋರಿಸುವದರಿಂದ ಪ್ರಯೋಜನವಿಲ್ಲ. ಅಫ್‌ಝುಲ್‌ಖಾನರು ವಿಜಾಪುರದ ರಾಜನಿಷ್ಠಸೇವಕರಾಗಿರುವರು; ನೀವು ಅವರ ವಿಷಯವಾಗಿ ಕುತ್ಸಿತವಾದ ಉದ್ಗಾರಗಳನ್ನು ತೆಗೆಯುವುದು ನಿಮ್ಮ ಗೌರವಕ್ಕೆ ಸರಿಯಾದುದಲ್ಲ. ಇದರಿಂದ ಮರಾಟರೊಡನೆ ಕಾದುವುದಕ್ಕೆ ನಿಮ್ಮ ಮನಸ್ಸಿಲ್ಲವೆಂದು ನಾವು ತಿಳಿಯಬೇಕೋ ಹೇಗೆ ? ಹಾಗಿದ್ದರೆ ಸ್ಪಷ್ಟವಾಗಿ ತಿಳಿಸಿರಿ; ಅಂದರೆ ನಾವು ಬೇರೊಬ್ಬ ಸೇನಾಪತಿಯನ್ನು ಈ ಕೆಲಸಕ್ಕೆ ನಿಯಮಿಸುತ್ತೇವೆ. ಇನ್ನುಮೇಲೂ ಶಿವಾಜಿಯ ಮೇಲೆ ಕಯ್ಮಾಡದೆ ಇರುವುದು ದರಬಾರಕ್ಕೆ ಹಿತಕರವಾದುದಲ್ಲ; ಆದುದರಿಂದ ಇನ್ನು ಮೇಲಾದರೂ ಇಂತಹ ಸುಳ್ಳುಕಾರಣವನ್ನು ಮುಂದುಮಾಡದೆ ಕೆಲಸವನ್ನು ಪ್ರಾರಂಭಿಸಬೇಕು. ”

ಈ ಉತ್ತರವನ್ನು ಓದಿದೊಡನೆಯೇ ಬಜಾಜಿಯ ಕಾಲೊಳಗಿನ ಕೋಪಾಗ್ನಿಯು ನಡುನೆತ್ತಿಗೆ ಏರಿತು. ಆದರೆ ಮಾಡುತ್ತಾನೇನು ? ಮನಸ್ಸಿನಲ್ಲಿಯೇ ಸಂತಾಪಗೊಂಡನು. ಈ ಪ್ರಕಾರದ ಉತ್ತರವು ಬಜಾಜೀಖಾನನಿಗೆ ಬಂದ ಸಂಗತಿಯು ಅಫ್‌ಝುಲ್‌ಖಾನನಿಗೆ ಹೇಗೆ ಗೊತ್ತಾಯಿತೋ ದೇವರಿಗೇ ಗೊತ್ತು !

ಬಾದಶಹನಿಂದ ಬಜಾಜಿಗೆ ಈ ಪತ್ರವು ಬಂದ ದಿವಸದಿಂದ ಆತನ ಕಣ್ಣುಗಳು ನೆತ್ತಿಯ ಮೇಲೆಯೇ ಬಂದುವು.

ಇಬ್ಬರು ಖಾನರಿಗೂ ವ್ಯಕ್ತದ್ವೇಷವು ಆರಂಭವಾಯಿತು. ಅಫ್‌ಝುಲ್ ಖಾನನು ಬಜಾಜಿಯ ಪ್ರತಿಯೊಂದು ಯೋಚನೆಯಲ್ಲಿಯೂ ಅಡ್ಡಬರಲಾರಂಭಿಸಿದನು; ಆತನಂತೆಯೇ ಆತನ ಸೇವಕರೂ ಏರಿ ಕೂತರು. ಅವರು ಬರುಹೋಗುವ ಮರಾಟ ದಾರಿಗಾರರನ್ನು ಬಡಿದು ಹೊಡೆದು ಅವರಲ್ಲಿದ್ದ ವಸ್ತುಗಳನ್ನು ಯಥೇಚ್ಛವಾಗಿ ಅಪಹರಿಸಹತ್ತಿದರು. ಕುಲೀನಸ್ತ್ರೀಯು ಆ ನೀಚರ ಕಣ್ಣಿಗೆ ಬಿದ್ದರೆ, ಯಾವ ತರದಿಂದ ಅವರು ಅವಳ ಅವಮಾನವನ್ನು ಮಾಡುತ್ತಿದ್ದರೆಂಬುದನ್ನು ಬಣ್ಣಿಸದಿರುವುದೇ ಒಳಿತು ! ಈ ತರದ ನಡೆವಳಿಕೆಗಳಿಂದ ಸೈನಿಕರಿಗೆ ಆವಶ್ಯಕವಾದ ಪದಾರ್ಥಗಳು ಕೂಡ ಸಿಕ್ಕದಂತಾವು. ಯಾಕಂದರೆ, ಮುಸಲ್ಮಾನರ ಶಿಬಿರಕ್ಕೆ ಬಂದು ಪದಾರ್ಥಗಳನ್ನು ಕೊಡಬೇಕಾದರೆ, ಬರತಕ್ಕವರು ತಮ್ಮ ಮಾನಮರ್ಯಾದೆಗಳನ್ನು ಗಂಟುಕಟ್ಟಿ ಇಟ್ಟೇ ಬರಬೇಕಾಗುತ್ತಿತ್ತು. ಹೀಗೆ ಆವಶ್ಯಕ ಪದಾರ್ಥಗಳು ಸಿಕ್ಕದಂತಾಗಲು, ಅಫ್‌ಝುಲ್‌ಖಾನನ ಸೈನಿಕರು ಸಮೀಪದ ಊರುಗಳನ್ನು ಲೂಟಿಮಾಡಿ ತಮ್ಮ ವ್ಯವಸ್ಥೆಯನ್ನು ಮಾಡಿಕೊಳ್ಳಲಾರಂಭಿಸಿದರು. ಆತನ ಸೈನ್ಯದ ಸುತ್ತುಮುತ್ತಲಿನ ಊರುಗಳು ಉರಿಯತೊಡಗಿದವು ! ಈ ಬಾಧೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಜನರು ಸ್ಥಲಾಂತರ ಮಾಡುವುದಕ್ಕೆ ಪ್ರಾರಂಭಿಸಿದರು. ಆದುದರಿಂದ ವಿಜಾಪುರದಿಂದಲೇ ತಮಗೆ ಬೇಕಾದ ಪದಾರ್ಥಗಳನ್ನು ತರಿಸಬೇಕಾಯಿತು ಆದರೆ ಆ ಪದಾರ್ಥಗಳು ಅಫ್‌ಝುಲ್‌ಖಾನನ ಶಿಬಿರಕ್ಕೆ ಚೆನ್ನಾಗಿ ಮುಟ್ಟುತ್ತಿದ್ದಿಲ್ಲ. ಲೂಟಿಗಾರರು ಹೊಂಚುಹಾಕಿಕೊಂಡು ಕುಳಿತು ಪದಾರ್ಥಗಳು ಬಂದೊಡನೆಯೇ ಅಪಹರಿಸಿಕೊಂಡು ಹೋಗುತ್ತಿದ್ದರು. ಪ್ರಸಂಗವಿಶೇಷದಲ್ಲಿ ಶಿಬಿರದೊಳಗಿನ ಶಸ್ತ್ರಾಸ್ತ್ರಗಳೂ ಕಳವಾಗಹತ್ತಿದುವು. ಆ ಲೂಟಿಗಾರರು ಶಿವಾಜಿ ಭೋಸಲೆಯ ಸೈನ್ಯದೊಳಗಿನವರೋ, ಅಥವಾ ಅಫ್‌ಝುಲ್‌ಖಾನನಿಂದ ಉದ್ಧ್ವಸ್ತವಾದ ಹಳ್ಳಿಯೊಳಗಿನ ನಾಗರಿಕರು ಖಾನನ ಮೇಲಿನ ಛಲವನ್ನು ತೀರಿಸಿಕೊಳ್ಳುವುದಕ್ಕಾಗಿ ಹೀಗೆ ಮಾಡುತ್ತಿದ್ದರೋ ದೇವರಿಗೇ ಗೊತ್ತು!

ಈ ಲೂಟಿಗಾರರ ಕಾಟದಿಂದ ಬಜಾಜೀಖಾನನು ಬೆದರಿಹೋದನು. ಯಾಕಂದರೆ ಸೇನಾಪತಿಯೆಂಬ ದೃಷ್ಟಿಯಿಂದ ಯುದ್ಧದ ಹೊಣೆಗಾರಿಕೆಯು ಆತನ ಮೇಲೆಯೇ ಇತ್ತು. ಅಫ್‌ಝುಲ್‌ಖಾನನು ಯಾವ ಮಾತಿಗೂ ಲಕ್ಷ್ಯಕೊಡುತ್ತಿದ್ದಿಲ್ಲ; ಇಷ್ಟೇ ಅಲ್ಲ; ಬಜಾಜೀಖಾನನಿಗೆ ಅಪಯಶಸ್ಸು ಪ್ರಾಪ್ತವಾಗಬೇಕೆಂದೇ

ಆತನು ಮನಃಪೂರ್ವಕವಾಗಿ ಇಚ್ಛಿಸುತ್ತಿದ್ದನು. ಬಜಾಜೀಖಾನನಿಗೆ ಜಯವು ಸಿಕ್ಕದೆ, ಅವಮಾನಿತನಾಗಿ ಆತನು ಮರಳಿಹೋದನೆಂದರೆ ತಾನು ಶಿವಾಜಿಯನ್ನು ಹಿಡಿದು ವಿಜಾಪುರದ ಕಡೆಗೆ ಎಳೆದುಕೊಂಡು ಹೋಗಿ ತನ್ನ ಪೌರುಷವನ್ನು ಪ್ರಕಾಶಪಡಿಸಬೇಕೆಂಬ ಮನೋರಾಜ್ಯದಲ್ಲಿ ಮಗ್ನನಾಗಿದ್ದುದರಿಂದ ಆತನು ನಿಶ್ಚಿಂತನಾಗಿದ್ದನು. ಬಜಾಜೀಖಾನನಿಗಾದರೂ ನಾನು ಈ ಕೆಲಸವನ್ನು ಏಕೆ ಕೈಕೊಂಡೆನೋ ಎಂದು ಎನಿಸತೊಡಗಿತು. ಹೇಗೇ ಆಗಲಿ, ಈ ಯುದ್ಧವು ಒಮ್ಮೆ ಮುಗಿದುಹೋದರೆ ಸಾಕೆಂದು ಆತನು ಅನ್ನುತ್ತಿದ್ದನು. ಆದರೆ ಈ ಕಾಳಗವು ಮುಗಿಯುವುದೆಂತು ? ಅಫ್‌ಝುಲ್‌ಖಾನನ ಅತ್ಯಾಚಾರದಿಂದ ಸೈನ್ಯಕ್ಕೆ ಕಾಳುಕಡಿಗಳು ಸಿಕ್ಕುವುದೇ ಕಷ್ಟವಾಗಿತ್ತು. ಆದುದರಿಂದ ಸೈನ್ಯದಲ್ಲಿ ಅನಾಯಕತ್ವದ ಆರಂಭವಾಗಿತ್ತು. ಬಜಾಜೀಖಾನನಿಗೆ ಈ ಅವ್ಯವಸ್ಥೆಯ ಕಾರಣವು ಗೊತ್ತಿತ್ತು; ಆದರೆ ಅದರ ಪ್ರತೀಕಾರವನ್ನು ಹೇಗೆ ಮಾಡಬೇಕೆಂಬುದನ್ನು ಅವನು ತಿಳಿಯದೆ ಹೋದನು. ಅಫ್‌ಝುಲ್‌ಖಾನನ ಶಿಪಾಯರು ಕೇಳಿದವರ ಮೈಮೇಲೆ ರೋಮಾಂಚಗಳು ಏಳುವಂತೆ ಬಡಬಗ್ಗರಿಗೆ ತೊಂದರೆಕೊಡುತ್ತಿದ್ದರು. ಬಜಾಜೀಖಾನನಿಗೆ ಇದು ಸ್ವಲ್ಪವಾದರೂ ಸೇರುತ್ತಿದ್ದಿಲ್ಲ. ಆದರೆ ಮಾಡುತ್ತಾನೇನು ? ಆತನು ಶಾಂತಿಪ್ರಿಯನೂ, ಅತ್ಯಾಚಾರನಿಷೇಧಕನೂ ಆಗಿದ್ದನು. ಆದರೂ ಮಾಡುತ್ತಾನೇನು ? ಅಫ್‌ಝುಲ್‌ಖಾನನ ದುರುಪದೇಶದಿಂದ ಬಜಾಜಿಯ ಸೇನೆಯೊಳಗಿನ ಮುಸಲ್ಮಾನರು ಉದ್ಧಟತನದಿಂದ ವರ್ತಿಸಲಾರಂಭಿಸಿದರು. ಈ ಪ್ರಕಾರದಿಂದ ಮೀರಿ ನಿಂತ ಆ ಮುಸಲ್ಮಾನನ ಸೊಕ್ಕನ್ನು ತಗ್ಗಿಸುವುದು ಸಜ್ಜನನಾದ ಈ ಬಜಾಜೀಖಾನನಿಗೆ ಹೇಗೆ ಸಾಧ್ಯವಾಗಬೇಕು ?

ಬಜಾಜೀಖಾನನು ಇದೇ ವಿಷಯವನ್ನು ಕುರಿತು ವಿಚಾರಮಾಡುತ್ತಿದ್ದನು. ಆದರೆ ಮನಸ್ಸಿನಲ್ಲಿ ಯಾವ ವಿಚಾರವೂ ನಿಶ್ಚಿತವಾಗಲೊಲ್ಲದು. ಆತನು ಒಂದು ದಿವಸ ಕುದುರೆಯ ಮೇಲೆ ಕುಳಿತು ಅಡ್ಡಾಡುತ್ತಿರುವಾಗ ದೂರದಿಂದ ಜನರ ಗದ್ದಲವು ಕೇಳಿಸಿತು. ಬರಬರುತ್ತ ಆ ಗದ್ದಲವು ಹೆಚ್ಚುತ್ತ ನಡೆಯಿತು. ಆಗ ಆತನ ಲಕ್ಷ್ಯವು ಸ್ವಾಭಾವಿಕವಾಗಿಯೇ ಅತ್ತಕಡೆಗೆ ಹೋಯಿತು! ಒಬ್ಬ ಹೆಂಗಸಿನ ಕರುಣಾಸ್ವರವು ಆ ಗೊಂದಲದಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಬಜಾಜೀಖಾನನಿಗೆ ಇದು ಸಹನವಾಗಲಿಲ್ಲ. ಅದರಿಂದ ಅವನು ತನ್ನ ಕುದುರೆಯನ್ನು ಅತ್ತಕಡೆಗೆ ತಿರುಗಿಸಿದನು. ಅಲ್ಲಿಗೆ ಹೋಗುವಷ್ಟರಲ್ಲಿ ವಾಡಿಕೆಯ ನೋಟವೇ ಆತನ ಕಣ್ಣಿಗೆ ಬಿತ್ತು. ಐದಾರು ಜನ ಮುಸಲ್ಮಾನ ಶಿಪಾಯರು ಒಬ್ಬ ಮರಾಟನನ್ನು

ಹಿಡಿದು ಒಂದೇ ಸಮನೆ ಹೊಡೆಯುತ್ತಿದ್ದರು. ಪಾಪ! ಆ ಬಡ ಮರಾಟನು ಒಂದೇ ಸಮನೆ ವಿನಯದಿಂದ ಬೇಡಿಕೊಳ್ಳುತ್ತಿದ್ದನು. 'ಸಾಲೇ, ಬದಮಾಷ, ಮಗರಗತ್ಮಾ' ಎಂಬುದಾಗಿ ಪ್ರತಿಯೊಂದು ಪೆಟ್ಟುಹೊಡತಕ್ಕೂ ಬೈಗುಳದ ಮಳೆಯನ್ನೇ ಅವರು ಸುರಿಸುತ್ತಿದ್ದರು. ಆ ಮರಾಟನ ಸಮೀಪದಲ್ಲಿ ಸುಂದರಿಯಾದೊರ್ವ ಹೆಂಗಸಿದ್ದಳು. ಬೇರೆ ಮೂರು ನಾಲ್ಕು ಜನ ಮುಸಲ್ಮಾನರು ಆ ಹುಡುಗೆಗೆ ಭೀಭತ್ಸವಾದ ಚೇಷ್ಟೆಯನ್ನು ಮಾಡುತ್ತ ನಿಂತುಕೊಂಡಿದ್ದರು. ಈ ಹೊತ್ತಿನದಿವಸ ಸಿಕ್ಕ ಈ ಅಮೌಲ್ಯವಾದ ಬೇಟೆಯನ್ನು ಯಾವ ರೀತಿಯಿಂದ ನುಂಗಬೇಕೆಂಬದಾಗಿ ಅವರು ತಮ್ಮ ತಮ್ಮೊಳಗೆ ಯೋಚಿಸುತ್ತಿದ್ದರು. ಆ ಸ್ತ್ರೀಯು ಪರಮಸುಂದರಿಯಾಗಿದ್ದಳು. ಆದರೆ ಈಗ ಆ ರಾಕ್ಷಸರ ಪೀಡೆಯಿಂದ ಆಕೆಯ ಕಪ್ಪಾದ ಕಣ್ಣುಗಳು ಚಂಚಲವಾಗಿದ್ದುವು. ಮುಂದೆ ತನ್ನ ಪರಿಣಾಮವೇನಾಗುವುದೋ ಎಂಬ ಚಿಂತೆಯಿಂದ ಆಕೆಯ ಮುಖಕಮಲವು ಬಾಡಿಹೋಗಿತ್ತು. ಆದರೆ ಆ ನರಾಧಮರು ಇದೆನ್ನೆಲ್ಲ ಲಕ್ಷಿಸುವರೆ? ಆ ಸುಮನೋಹರೆಯಾದ ತರುಣಿಯನ್ನು ತಮ್ಮ ಸುಖಕ್ಕೋಸ್ಕರವಾಗಿ ಅಲ್ಲಾನು ಕಳಿಸಿಕೊಟ್ಟಿರುವನೆಂದು ಅವರು ತಿಳಿದುಕೊಂಡರು. ಜಗತ್ತಿನೊಳಗಿನ ಸುಂದರಿಯರೆಲ್ಲರೂ ತಮ್ಮ ಉಪಭೋಗಕ್ಕಾಗಿಯೂ, ಮರಾಟರೆಲ್ಲರೂ ತಮಗೆ ಗುಲಾಮರಾಗಿದ್ದು ತಮ್ಮ ಸೇವೆ ಮಾಡುವುದಕ್ಕಾಗಿಯೂ, ಐಶ್ವರ್ಯವೆಲ್ಲವೂ ತಮ್ಮ ಸುಖಕ್ಕೋಸ್ಕರವಾಗಿಯೂ ನಿರ್ಮಿತವಾಗಿವೆಯೆಂದು ಅವರು ಕಲ್ಪಿಸಿಕೊಂಡಿದ್ದರು. ಅಂದಮೇಲೆ ಪಾಪ! ಆ ಹುಡುಗಿಯ ಮನಃಸ್ಥಿತಿಯನ್ನು ಅವರೇಕೆ ವಿಚಾರಮಾಡುವರು? ನಿರ್ಘೃಣರಾದ ಆ ಪಾಪಾತ್ಮರು ಆ ನಿರಪರಾಧಿಯಾದ ಗಂಡನನ್ನು ಹೊಡೆಯುವುದಕ್ಕೂ ಬಡಿಯುವುದಕ್ಕೂ ಹಿಂದೆ ಮುಂದೆ ನೋಡಬಹುದೇ?

ಬಜಾಜೀಖಾನನು ಆ ಸ್ಥಳಕ್ಕೆ ಬಂದುದನ್ನು ನೋಡಿ ಮುಸಲ್ಮಾನರೆಲ್ಲರೂ ಬೆದರಿದರು. ಈ ಅಧಿಕಾರಿಯನ್ನು ವಿನಯದಿಂದ ಬೇಡಿಕೊಂಡರೆ ನಮ್ಮ ಬಿಡುಗಡೆಯಾಗುವುದೆಂದು ಆ ದಂಪತಿಗಳಿಗೆ ಸ್ವಲ್ಪ ಆಸೆಯು ಉತ್ಪನ್ನವಾಯಿತು. ಆ ಮರಾಟನು ಇಬ್ಬರು ಮುಸಲ್ಮಾನರನ್ನು ಹಿಂದಕ್ಕೆ ದೂಡಿ, ಅವಸರದಿಂದ ಬಜಾಜೀಖಾನನ ಕುದುರೆಯ ಮುಂದೆ ಬಂದು ನಿಂತನು. ಆತನು ಇಷ್ಟು ಚಪಲತನದಿಂದ ಮುಂದೆ ಬಂದುದನ್ನು ನೋಡಿ ಮುಸಲ್ಮಾನರು ಚಕಿತರಾದರು. ಆಗ ಮೊದಲಿನ ಇಬ್ಬರು ಮುಸಲ್ಮಾನರು ತೀವ್ರವಾಗಿ ಮುಂದೆ ಬಂದು ಈ ಮರಾಟನಿಗೆ ಒಂದು ಏಟು ಕೊಟ್ಟು 'ಸಾಲೇ, ಕಹಾ ಭಾಗತಾಹೈ' ಎಂದು ನುಡಿದರು. ಆದರೆ ಬಜಾಜೀ

ಖಾನನು ಅವರನ್ನು ಹಿಂದಕ್ಕೆ ಅಟ್ಟಿ ಹೀಗೆ ಹೇಳಿದನು. "ಇವನನ್ನು ಬಿಟ್ಟು ಬಿಡಿರಿ. ಆ ನಿರಪರಾಧಿನಿಯಾದ ಸ್ತ್ರೀಯನ್ನು ಅವಮಾನಗೊಳಿಸುವ ಆಲೋಚನೆಯಲ್ಲಿದ್ದಿರಲ್ಲವೇ? ನೀವೆಲ್ಲರೂ ಬದಮಾಷ ಜನರು! ನೀವುಮಾಡುವ ಇಂತಹ ಅತ್ಯಾಚಾರಗಳಿಂದಲೇ ಸೈನ್ಯಕ್ಕೆ ಆಹಾರದ ಪದಾರ್ಥಗಳು ಕೂಡ ಸಿಕ್ಕದಂತಾಗಿವೆ. ನಿಮ್ಮಂತಹ ಕೃತಘ್ನರ ಅನಾಚಾರದಿಂದಲೇ ಲೂಟಿಗಾರರು ಬಂದು ನಡುಹಗಲಿನಲ್ಲಿಯೇ ಶಿಬಿರವನ್ನು ಲೂಟಿ ಮಾಡತೊಡಗಿದ್ದಾರೆ."

ಆ ಶಿಪಾಯರಿಗೆ ಅಫ್‌ಝುಲ್‌ಖಾನನ ಬೆಂಬಲವಿತ್ತು. ಆದರೂ ಬಜಾಜಿಯ ಮೇಲೆ ಬಾಯ್ಬಿಡುವುದಕ್ಕೆ ಅವರಿಗೆ ಧೈರ್ಯವಾಗಲಿಲ್ಲ, ಯಾಕಂದರೆ, ಈಗ ಮಾತ್ರ ಅಫ್‌ಝುಲ್‌ಖಾನನಿಗೂ ಬಜಾಜಿಗೂ ವೈಮನಸ್ಯವು ಉತ್ಪನ್ನವಾಗಿದ್ದರೂ ಬಜಾಜೀಖಾನನೆಂದರೆ ವಿಜಾಪುರದ ಸನ್ಮಾನಿತನಾದ ಸರದಾರನೆಂಬುದು ಅವರಿಗೆ ಗೊತ್ತಿತ್ತು. ಆದುದರಿಂದ ಅವರು ವಿನಯದಿಂದ ಹೀಗೆ ಹೇಳಿದರು— "ಸರಕಾರ, ಇವರು ವೈರಿಗಳ ಗುಪ್ತಚಾರರಾಗಿರಬಹುದು. ಇಲ್ಲವಾದರೆ ಇವರು ನಮ್ಮ ಶಿಬಿರದ ಕಡೆಗೆ ಬರಬೇಕಾದ ಅವಶ್ಯಕತೆಯೇ ಇದ್ದಿಲ್ಲ. ಆದುದರಿಂದಲೇ ನಮಗೆ ಸಂಶಯಬಂದು ಇವರನ್ನು ಹಿಡಿದೆವು. ಇನ್ನು ಮುಂದೆ ಇವರನ್ನು ಖಾವಿಂದರವರ ಸನ್ನಿಧಿಗೆ ತರತಕ್ಕವರಿದ್ದೆವು; ಇಷ್ಟರಲ್ಲಿ ತಾವೇ ಇಲ್ಲಿಗೆ ದಯಮಾಡಿಸಿದಿರಿ."

**ಬಜಾಜೀಖಾನ**:—ಎಲೈ ಬದಮಾಷರೇ, ಆ ಹೆಣ್ಣುಮಗಳ ಸೆರಗನ್ನು ಹಿಡಿದು ಏಕೆ ಜಗ್ಗುತ್ತಿದ್ದಿರಿ? ನಿಮ್ಮ ತಾಯಿ—ಅಕ್ಕ—ತಂಗಿಯರನ್ನು ಈ ಪ್ರಕಾರವಾಗಿ ಅವಮಾನಗೊಳಿಸಿದರೆ ನಿಮ್ಮ ಮನಸ್ಸಿಗೆ ಹೇಗಾಗುವದು? ಹರಾಮಖೋರಾ, ಹೇಳು. ನಾನು ಇಲ್ಲಿ ಬಂದಾಗ ನೀನು ಆ ಹೆಣ್ಣುಮಗಳ ಸೆರಗನ್ನು ಹಿಡಿದು ಜಗ್ಗುತ್ತಿರಲಿಲ್ಲವೇ?

ಹೀಗೆ ಮಾತನಾಡಿ ಬಜಾಜೀಖಾನನು, ತನ್ನ ಎದುರಿಗೆ ನಿಂತು ಮಾತನಾಡುತ್ತಿದ್ದ ಶಿಪಾಯಿಯನ್ನು ಕೇಗಣ್ಣಿನಿಂದ ನೋಡಿದನು.

**ಶಿಪಾಯಿ**:—ಸರಕಾರ, ಆ ಸ್ತ್ರೀಯು ಓಡಿಹೋಗುವ ಆಲೋಚನೆಯಲ್ಲಿದ್ದಳು; ಆದುದರಿಂದ ಹಿಡಿಯುವ ಪ್ರಸಂಗಬಂತು.

ಇಷ್ಟರಲ್ಲಿ ಆ ಸ್ತ್ರೀಯು ನಡುವೇ ಮಾತನಾಡಿದಳು. "ಇದೆಲ್ಲವೂ ಸುಳ್ಳು. ನಾನು ಓಡಿಹೋಗುವ ಪ್ರಯತ್ನವನ್ನೇ ಮಾಡಲಿಲ್ಲ. ಇದೆಲ್ಲವನ್ನೂ ಇವರು ಹುಟ್ಟಿಸಿಕೊಂಡು ಹೇಳುತ್ತಾರೆ. ತಮ್ಮ ಶಿಬಿರದಲ್ಲಿ ಬೇಗಮುಸಾಹೇಬರು ಇರುತ್ತಾರೆಂಬುವನ್ನು ತಿಳಿದು, ಅವರ ಸೇವೆಗೆ ನಿಂತರೆ ನಮ್ಮ ಹೊಟ್ಟೆತುಂಬಬಹುದೆಂಬ ಆಸೆ

ಯಿಂದ ನಾವು ಇಲ್ಲಿಗೆ ಬಂದೆವು. ಹಿಂದೂಸರದಾರರ ಮನೆಯಲ್ಲಿ ಆಳುತನಕ್ಕೆ ನಿಂತರೆ ನಮಗೆ ವಿಶೇಷವೇನೂ ಸಿಕ್ಕುವದಿಲ್ಲ. ಅವರೇ ಭಿಕ್ಷುಕರಾಗಿರುವಾಗ ನಮಗೇನು ಕೊಡಬಲ್ಲರು! ಆದರೆ ಬೇಗಮುಸಾಹೇಬರ ಕೃಪಾದೃಷ್ಟಿಯು ಬಡ ಬಗ್ಗರಮೇಲೆ ಬಿದ್ದರೆ ಅವರು ಬಂಗಾರದ ಮಳೆಯನ್ನು ಸುರಿಸಬಹುದು !"

ಆ ಹುಡುಗಿಯ ಮಾತನ್ನು ಕೇಳಿ ಬಜಾಜಿಯು ಚಕಿತನಾದನು. ಅವಳ ಧ್ವನಿಯು ಆತನಿಗೆ ಪರಿಚಿತವಾಗಿ ತೋರಿದುದರಿಂದ ಅವಳನ್ನು ದಿಟ್ಟಿಸಿ ನೋಡಿದನು. ಅವಳ ಮುಖವನ್ನೂ ತಾನು ಎಂದೋ ನೋಡಿರಬೇಕೆಂದೆನಿಸಿತು. ಕೆಲಹೊತ್ತಿನವರೆಗೆ ಆತನು ಅವಳನ್ನೇ ನೋಡುತ್ತ ನಿಂತುಕೊಂಡನು. ಇಷ್ಟರಲ್ಲಿ ಆತನಿಗೆ ಅವಳ ಪರಿಚಯವೇ ಹತ್ತಿತೋ ಅಥವಾ ಇನ್ನಾರದಾವರೂ ನೆನೆಪಾಯಿತೋ ಅವನಿಗೇ ಗೊತ್ತು ! ಅವನು ಚಕಿತನಾದನು ! ಆತನ ಹಣೆಯ ಮೇಲೆ ನಿರಿಗೆಗಳು ಬಿದ್ದುವು. ಆಗಳವನು ಶಿಪಾಯರಿಗೆ ಹೇಳಿದನು. "ನೀವು ನಿಮ್ಮ ಸ್ಥಳಕ್ಕೆ ಹೊರಟುಹೋಗಿರಿ. ಇವರು ಶತ್ರುಗಳ ಗುಪ್ತಚಾರರೋ ಹೇಗೆಂಬುದನ್ನು ನಾನು ವಿಚಾರಿಸಿಕೊಳ್ಳುತ್ತೇನೆ!"

ಶಿಪಾಯರು ಹೊರಟುಹೋದ ಬಳಿಕ ಬಜಾಜೀಖಾನನು ಆ ಇಬ್ಬರಿಗೂ ತನ್ನಸಂಗಡ ಬರುವಂತೆ ಅಪ್ಪಣೆ ಮಾಡಿದನು. ಖಾನನ ಕುದುರೆಯು ಮೆಲ್ಲಮೆಲ್ಲನೆ ನಡೆದಿದ್ದರೂ ಆತನ ಮನಸ್ಸಿನಲ್ಲಿ ವಿಚಾರಗಳು ಮಾತ್ರ ಶೀಘ್ರವಾಗಿಯೇ ನಡೆದಿದ್ದವು. ಆತನಿಗೆ ಹದಿನೈದು ಇಪ್ಪತ್ತು ವರುಷಗಳ ಹಿಂದಿನ ಕಾಲವು ನೆನಪಾಯಿತು. ಆ ಕಾಲದಲ್ಲಿ ಖಾನನು ತರುಣನಾಗಿದ್ದನು; ಆಗ ಇನ್ನೂ ಆತನಿಗೆ ಇಪ್ಪತ್ತು ವರುಷಗಳು ಮೀರಿದ್ದಿಲ್ಲ. ಆ ಕಾಲದಲ್ಲಿ ಇವಳಂತೆಯೇ ಮಂಜುಭಾಷಿಣಿಯಾದ, ಹದಿನೈದು ಹದಿನಾರು ವರುಷಗಳ ಒಬ್ಬ ತರುಣಿಯೊಡನೆ ಆತನ ವಿವಾಹವಾಗಿತ್ತು. ಆ ಸುಂದರಿಯ ಮೇಲೆ ಆತನ ಪ್ರೇಮವು ಬಹಳವಿತ್ತು. ಅವಳಾದರೋ ಪ್ರೇಮದ ಪ್ರತ್ಯಕ್ಷ ಮೂರ್ತಿಯಾಗಿದ್ದಳು. ಆ ಪ್ರೇಮಸಂಬಂಧದಿಂದ ಬಜಾಜಿಗೆ ಒಬ್ಬ ಮಗನೂ ಹುಟ್ಟಿದ್ದನು. ಆದರೆ ಈ ಸಂಗತಿಯೆಲ್ಲವೂ ಕೇವಲ ಸ್ವಪ್ನದಲ್ಲಿ ಸಂಘಟಿಸಿದುದೋ ಏನೋ ಎಂಬಂತೆ ಖಾನನು ಅದೆಲ್ಲವನ್ನು ಮರೆತುಬಿಟ್ಟಿದ್ದನು. ಆದರೆ ಈ ಹುಡಿಗೆಯ ದರ್ಶನದಿಂದ ಹಿಂದಿನ ಸಂಗತಿಯೆಲ್ಲವೂ ಆತನ ಮನೋಭೂಮಿಯಲ್ಲಿ ಮೂಡಿತು. ಆತನ ಪ್ರಿಯೆಯು ಹೀಗೆಯೇ ಇದ್ದಳು. ಅಂದಮೇಲೆ ಇವಳು ಯಾರು ! ಅವಳೇ ಇವಳಾಗಿರಲಿಕ್ಕಿಲ್ಲವೇ ? ಎಂಬ ಶಂಕೆಯು ಕೂಡ ಖಾನನ ಮನಸ್ಸಿನಲ್ಲಿ ಬಂತು. ಆದರೆ ಆ ಶಂಕೆಯು ಕೂಡಲೇ

ಬಯಲಾಯಿತು. ಯಾಕಂದರೆ ಆ ಮಾತಿಗೆ ಈಗ ಎಷ್ಟೋ ದಿನಗಳಾಗಿ ಹೋಗಿದ್ದುವು; ಆ ಕಾಲದಲ್ಲಿ ಅವನಿಗೆ ಗಡ್ಡಗಳೇಇದ್ದಿಲ್ಲ. ಈಗಲಾದರೋ ಆತನ ಗಡ್ಡಗಳು ಎದೆಯು ವರೆಗೆ ಬೆಳೆದಿದ್ದವು. ಅದರಲ್ಲಿಯೂ ನಡುನಡುವೆ ಒಂದೊಂದು ನರೆಗೂದಲವೂ ಶೋಭಿಸುತ್ತಿತ್ತು. ಈಗ ತನ್ನ ಆ ಪ್ರಿಯೆಯಾದರೂ ಇಳಿವಯಸ್ಸಿನವಳಾಗಿರಲಿಕ್ಕೆ ಬೇಕು. ಆದುದರಿಂದ ಇವಳು ಅವಳಲ್ಲ; ಇದು ಅಸಂಭವನೀಯವು. ಇವಳಾದರೋ ಹುಡುಗಿಯಾಗಿದ್ದಾಳೆ ! ಹಾಗಾದರೆ ಇವಳು ಯಾರಾಗಿರಬೇಕು ? ಅವಳಿಗೆ ತಂಗಿಯರೇ ಇರಲಿಲ್ಲ. ನನ್ನ ಪ್ರಿಯಳಿಂದ ಒಬ್ಬ ಮಗನು ಹುಟ್ಟಿದ್ದನು; ಮಗಳು ಹುಟ್ಟಿಯೇ ಇಲ್ಲ. ಇವಳಾದರೋ ನನ್ನ ಪ್ರಿಯೆಯಂತೆಯೇ ಇದ್ದಾಳೆ. ಅಂದಮೇಲೆ ಇವಳು ಯಾರು ? ನನ್ನ ಪ್ರಿಯೆಯು ಮಗಳೇ ಆಗಿರಲಿಕ್ಕಿಲ್ಲವಷ್ಟೇ ? ನಾನು ಮುಸಲ್ಮಾನನಾದ ಬಳಿಕ ಅವಳು ಇನ್ನೊಬ್ಬನೊಡನೆ ವಿವಾಹಮಾಡಿಕೊಂಡಿರಬಹುದು; ಮತ್ತು ಆ ದ್ವಿತೀಯಸಂಬಂಧದಿಂದ ಈ ಹುಡುಗೆಯು ಹುಟ್ಟಿರಬಹುದು. ಇಲ್ಲದಿದ್ದರೆ ಅವಳಿಗೂ ಇವಳಿಗೂ ಇಷ್ಟೊಂದು ಸಾಮ್ಯವಿರುವ ಬಗೆ ಹೇಗೆ ? ಏನು ? ಆ ನನ್ನ ಪ್ರೇಮಪುತ್ಥಳಿಯು ಪುನರ್ವಿವಾಹವನ್ನು ಮಾಡಿಕೊಂಡಳೇ ? ಹಾಗಾದರೆ ಅವಳು ಮೊದಲು ತೋರಿಸುತ್ತಿದ್ದ ಪ್ರೇಮವು ನಿಜವಾದುದಲ್ಲ ! ಆದರೆ ಅವಳು ಮಾಡಿದುದೇನೂ ಅವಾಸ್ತವವಲ್ಲ ! ನಾನಾದರೋ ಅವಳನ್ನು ಮರೆತುಬಿಟ್ಟು ಮತ್ತೊಬ್ಬಳ ಪ್ರೇಮಪಾಶದಲ್ಲಿ ಸಿಕ್ಕಿಕೊಳ್ಳಲಿಲ್ಲವೇ ? ಆದರೆ ನನ್ನ ಪ್ರಿಯೆಯು ಪುನರ್ವಿವಾಹವನ್ನು ಮಾಡಿಕೊಂಡಳೆಂಬ ಕಲ್ಪನೆಯೇ ನನಗೇಕೋ ಅಸಹ್ಯವೆನಿಸುತ್ತದೆ ! ಅವಳು ನಿಜವಾಗಿಯೂ ಅಂತಹಳಲ್ಲ ! ಏನು ? ಹಿಂದೂ ಸ್ತ್ರೀಯಾದ ನನ್ನ ಪ್ರಿಯೆಯು ಇನ್ನೊಬ್ಬರವಳಾದಳೇ ? ಛೇ ! ಛೇ ! ಇದು ಅಶಕ್ಯ ! ಹಾಗಾದರೆ ಇವಳು ಯಾರು ?

ಖಾನನ ಮನಸ್ಸಿನಲ್ಲಿ ಈ ಪ್ರಕಾರದ ವಿಚಾರತರಂಗಗಳು ತೂಗಾಡುತ್ತಿರಲು ಆತನು ಡೇರೆಯ ಸಮೀಪಕ್ಕೆ ಬಂದನು. ಆತನ ಸೇವಕರು ಆತನನ್ನು ಕುದುರೆಯಿಂದ ಕೆಳಗೆ ಇಳಿಸಿಕೊಳ್ಳುವದಕ್ಕಾಗಿಯೂ ಕುದುರೆಯನ್ನು ಹಿಡಿಯುವದಕ್ಕಾಗಿಯೂ ಮುಂದೆ ಬಂದರು. ಆಗ ಖಾನನು ವಿಚಾರಮಗ್ನತೆಯಿಂದ ಎಚ್ಚತ್ತನು. ತನ್ನ ಹಿಂದಿನಿಂದ ಆ ಇಬ್ಬರೂ ಬರುತ್ತಿರುವರೆಂಬ ಸ್ಮರಣೆಯೇ ಅವನಿಗಿದ್ದಿಲ್ಲ. ಆ ಗಂಡಹೆಂಡಿರು ಓಡಿಹೋಬೇಕೆಂದು ಬಯಸಿದ್ದರೆ ಸುಲಭವಾಗಿಯೇ ಹೋಗಬಹುದಾಗಿತ್ತು. ಇಷ್ಟು ಹೊತ್ತಿನ ವರೆಗೆ ತಾನು ಅವರ ಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲವೆಂಬುದು ನೆನಪಾದ ಕೂಡಲೇ ಅವರು ಓಡಿಹೋದರೋ ಏನೋ ಎಂಬ ಶಂಕೆಯಿಂದ ತಿರುಗಿ ನೋಡಿದನು. ಅವರಿಬ್ಬರೂ ಮೌನದಿಂ

ದಲೇ ಬರುತ್ತಿದ್ದರು. ಇದರಿಂದ ಅವರು ಶತ್ರುಪಕ್ಷದವರಲ್ಲವೆಂಬ ನಂಬುಗೆಗೆ ಸ್ವಲ್ಪ ಅವಕಾಶ ಸಿಕ್ಕಿತು. ಆಗ ಖಾನನು ತನ್ನ ಸೇವಕನನ್ನು ಕರೆದು ಹೀಗೆ ಹೇಳಿದನು—' ಇವರಿಬ್ಬರಿಗೂ ಸರಿಯಾದ ವ್ಯವಸ್ಥೆಯನ್ನು ಮಾಡಿಡು. ಆದರೆ ಇವರ ಮೇಲೆ ಪೂರ್ಣಲಕ್ಷ್ಯವಿರಲಿ. ಆಮೇಲೆ ಇವರಿಬ್ಬರನ್ನೂ ನಾನು ಕುಳಿತು ಕೊಳ್ಳುವ ಡೇರೆಗೆ ಕರೆದುಕೊಂಡು ಬಾ. ಇವರಿಂದ ಶತ್ರುಗಳ ಸಂಬಂಧದ ವರ್ತಮಾನವನ್ನು ತಿಳಿದುಕೊಳ್ಳಬೇಕಾಗಿದೆ. "

ಇಷ್ಟು ಹೇಳಿ ಅವರನ್ನು ಕಳಿಸಿಕೊಟ್ಟ ಬಳಿಕ ಖಾನನು " ಇವಳು ಯಾರು? " ಎಂಬಪ್ರಶ್ನೆಯನ್ನು ವಿಚಾರಿಸತೊಡಗಿದನು. ಅವನಿಗೆ ಎರಡನೆಯದೇನೂ ಸೂಚಿಸದಂತಾಯಿತು. ಆತನಿಗೆ ಜಾಗ್ರತಾವಸ್ಥೆಯಲ್ಲಿಯೂ ಸ್ವಪ್ನಾವಸ್ಥೆಯಲ್ಲಿಯೂ **" ಇವಳು ಯಾರು ? "** ಎಂಬ ಒಂದೇ ಒಂದು ಪ್ರಶ್ನೆಯು ನೆನಪಾಗುತ್ತಿತ್ತು !

## ಒಂಬತ್ತನೆಯ ಪ್ರಕರಣ

## ವಿಷಲಿಪ್ತಶಲ್ಯ !

ಆ ಗಂಡಹೆಂಡಿರಿಬ್ಬರೂ ಬಜಾಜೀಖಾನನ ಶಿಬಿರದಲ್ಲಿ ಇರುತ್ತಿದ್ದರು. ಬಜಾಜಿಯ ಸೇವಕರು ಅವರಿಗೆ ಯಾವತರದ ಕೊರತೆಯೂ ಉಂಟಾಗದಂತೆ ವ್ಯವಸ್ಥೆಯನ್ನು ಮಾಡಿದ್ದರು; ಆದರೆ ಶಿಬಿರದ ಹೊರಗೆ ಹೋಗಲು ಮಾತ್ರ ಅವರಿಗೆ ಪ್ರತಿಬಂಧವಿತ್ತು.ಅವರಿಗಾದರೂ ಶಿಬಿರವನ್ನು ಬಿಟ್ಟು ಹೋಗುವ ಉತ್ಸುಕತೆಯೇ ಇದ್ದಿಲ್ಲ. ಖಾನರ ಕುದುರೆಯ ಲಾಯದಲ್ಲಿ ಯಾವದಾದರೊಂದು ಕೆಲಸವನ್ನು ದೊರಕಿಸುವದಕ್ಕಾಗಿ ನಾನೂ, ಬೇಗಮರ ಕೈಕೆಳಗೆ ಯಾವದಾದರೊಂದು ಕೆಲಸವನ್ನು ಸಂಪಾದಿಸುವದಕ್ಕಾಗಿ ನನ್ನ ಹೆಂಡತಿಯೂ, ಇಲ್ಲಿಗೆ ಬಂದಿದ್ದೇವೆಂದು ಆ ಮರಾಟನು ಖಾನನ ಸೇವಕರ ಮುಂದೆ ಹೇಳಲಾರಂಭಿಸಿದನು. ಖಾನನು ಅವರನ್ನು ತನ್ನಲ್ಲಿ ಇಟ್ಟುಕೊಳ್ಳುವುದಕ್ಕೆ ಸಿದ್ಧನೇ ಇದ್ದನು. ಆದರೆ ಅವರಿಬ್ಬರೂ ಶತ್ರುಗಳ ಪಕ್ಷದವರೋ ಅಲ್ಲವೋ ? ಎಂಬುದನ್ನು ಪರೀಕ್ಷಿಸಿ ತಿಳಿದುಕೊಳ್ಳಬೇಕಾಗಿತ್ತು. ನೀವು ಮರಾಟ ಸರದಾರರಲ್ಲಿ ಕೆಲಸಕ್ಕೆ ನಿಲ್ಲುವುದನ್ನು ಬಿಟ್ಟು ಇಲ್ಲಿಗೇಕೆ ಬಂದಿರೆಂದು ಖಾನನ ಸೇವಕರು ಅವರನ್ನು

ಕೇಳಲು, ಅವರು ಹೀಗೆ ಉತ್ತರ ಕೊಡುತ್ತಿದ್ದರು:—" ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುವುದೇ ಮರಾಟರಿಗೆ ಸಾಕುಬೇಕಾಗುತ್ತದೆ. ಅಂದಮೇಲೆ ಅವರು ಎರಡನೆಯವರನ್ನು ಪೋಷಿಸುವದು ಹೇಗೆ ?" ಅವರಿಬ್ಬರೂ ಶಿವಾಜಿಯನ್ನೂ, ಅವನ ಅನುಯಾಯಿಗಳನ್ನೂ ಯಥೇಚ್ಛವಾಗಿ ನಿಂದಿಸುತ್ತಿದ್ದರು. " ಅವರ ದೈವದಲ್ಲಿ ಭಿಕ್ಷೆ ಬೇಡುವುದನ್ನೇ ಬರೆದಿದೆ ; ಅವರಾದರೂ ಏನು ಮಾಡಿಯಾರು ? ಹಾಗಲ್ಲದಿದ್ದರೆ ಮುಸಲ್ಮಾನರ ಕೃಪೆಯಿಂದ ಪ್ರಾಪ್ತವಾದ ಸರದಾರತನವನ್ನು ಸ್ವೀಕರಿಸಿ ಸುಖದಿಂದ ಜೀವನ ಮಾಡದೆ, ಅಲ್ಲದ ಕೆಲಸ ಮಾಡುತ್ತ ಬಂಡು ಗಾರರೆನಿಸಿಕೊಂಡು ದೇಹಾಂತ ಶಿಕ್ಷೆಯನ್ನು ಹೊಂದುವ ದುರ್ಬುದ್ಧಿಯು ಅವರಲ್ಲಿ ಉತ್ಪನ್ನವಾಗುತ್ತಿತ್ತೇ ? ನಮಗೆ ಬೇಕಾದಷ್ಟು ಸಂಬಳವನ್ನು ಕೊಟ್ಟರೂ ನಾವು ಅವರ ಸೇವೆಯನ್ನು ಸ್ವೀಕರಿಸಲಾರೆವು ; ಅಂದಮೇಲೆ ಜೀವಕ್ಕೆ ಕೂಡ ಎರವಾಗುವಂತಹ ಗುಪ್ತದೂತರ ಕೆಲಸವನ್ನು ಯಾರು ಕೈಗೊಳ್ಳುವರು ? ಮತ್ತು ಗುಪ್ತದೂತನ ಕೆಲಸವನ್ನು ಕೈಕೊಂಡ ಗಂಡಸು, ಇಂತಹ ಸುಂದರಿಯಾದ ರಮಣಿಯನ್ನು ಸಂಗಡ ಕರಕೊಂಡು ಮುಸಲ್ಮಾನರ ಶಿಬಿರವನ್ನು ಸೇರುವುದಕ್ಕೆ ಸಿದ್ಧನಾಗಬಹುದೇ ? ಖಾನಸಾಹೇಬರು ಸೇನಾಪತಿಗಳಾಗಿದ್ದುದರಿಂದ ಎಲ್ಲ ತರದ ಹೊಣೆಗಾರಿಕೆಯೂ ಅವರ ತಲೆಯ ಮೇಲೆ ಇದೆ. ಆದುದರಿಂದ ನಮ್ಮನ್ನು ಚೆನ್ನಾಗಿ ಪರೀಕ್ಷಿಸಿದ ಹೊರತು ತಮ್ಮ ಕಯ್ಕೆಳಗೆ ಇಟ್ಟುಕೊಳ್ಳದಿರುವುದು ಯೋಗ್ಯವೇ ಆಗಿದೆ. ನಾವಾದರೂ ಖಾನಸಾಹೇಬರ ಆಶ್ರಯವನ್ನು ಎಂದೂ ಬಿಡುವಂತಿಲ್ಲವೆಂದೇ ನಿಶ್ಚಯಮಾಡಿದ್ದೇವೆ."

ಬಜಾಜೀಖಾನನ ಒಬ್ಬ ಸೇವಕನು ಮಾತನಾಡಿದನು:—" ನೀವು ನಮ್ಮ ಖಾನರ ಕಡೆಗೆ ಬಂದುದು ನಿಮ್ಮ ಸುದೈವವಷ್ಟೇ ! ಒಂದು ವೇಳೆ ನೀವು ಅಫ್‌ಝುಲ್ ಖಾನನ ಕಯ್ಯಲ್ಲಾಗಲೀ ಆತನ ಶಿಪಾಯರ ವಶದಲ್ಲಾಗಲಿ ಸಿಕ್ಕಿದ್ದರೆ ನಿಮ್ಮ ಪರಿಣಾಮವು ನೆಟ್ಟಗಾಗುತ್ತಿದ್ದಿಲ್ಲ ; ಮತ್ತು ನಿಮ್ಮ ಹೆಂಡತಿಯ ಸ್ಥಿತಿಯಂತೂ ಯಾವ ಪ್ರಕಾರದ್ದಾಗುತ್ತಿತ್ತೆಂಬುದನ್ನು ಹೇಳುವುದು ಅಸಾಧ್ಯವೇ ಸರಿ !"

" ಹೌದು. ನಾವು ಸ್ವಲ್ಪ ಹೊತ್ತಿನ ವರೆಗೆ ಆ ಸುಖವನ್ನು ಅನುಭವಿಸಿದ್ದೇವೆ ! " ಎಂದು ಆ ಮರಾಟನು ಇತ್ಥಂಭೂತವಾದ ಎಲ್ಲ ಸಂಗತಿಯನ್ನು ಹೇಳಿದನು.

" ದೈವವು ನೆಟ್ಟಗಿದ್ದುದರಿಂದಲೇ ಪಾರಾದಿರಿ ; ಇಲ್ಲವಾದರೆ ಬದುಕುವುದೇ ಕಷ್ಟವಾಗುತ್ತಿತ್ತು." ಎಂದು ಎಲ್ಲರೂ ಅಭಿಪ್ರಾಯಪಟ್ಟರು. ಆಗ ಮೊದಲಿನ ಸೇವಕನು ಮಾತನಾಡಿದನು. " ಅಫ್‌ಝುಲ್‌ಖಾನನೆಂದರೆ ಪ್ರತ್ಯಕ್ಷ ರಾವಣನು ! ಅವನಿಗೆ ಹತ್ತು ತಲೆಗಳೂ ಇಪ್ಪತ್ತು ಕಯ್ಗಳೂ ಇಲ್ಲವೆಂಬುದೊಂದೇ

ಕೊರತೆ! ದುಷ್ಟತನದಲ್ಲಿ ಆತನಿಗೆ ಸಮಾನರಾರೂ ಇಲ್ಲ!" ಆಗ ಆ ಮರಾಟನು- "ಹವಾಲದಾರಸಾಹೇಬ, ನಿಮ್ಮ ಯಜಮಾನಸಾಹೇಬರು ಹೇಗಿದ್ದಾರೆ ?" ಎಂದು ಕೇಳಿದನು.

ಹವಾಲದಾರನೆಂದು ಸಂಬೋಧಿಸಿ ತನಗೆ ಬಹುಮಾನವನ್ನು ಕೊಟ್ಟುದಕ್ಕಾಗಿ ಆ ಸೇವಕನಿಗೆ ಅತ್ಯಂತಾನಂದವಾಯಿತು. ಆಗಲವನು ಮಾತನಾಡಿದನು. "ನಮ್ಮ ಯಜಮಾನರು ಸಾಕ್ಷಾತ್ ರಾಮಚಂದ್ರನಂತೆ ಇದ್ದಾರೆ. ಶಾಂತಶೀಲರೂ ಉದಾರಸ್ವಭಾವದವರೂ ಆಗಿದ್ದಾರೆ. ಅವರು ತಮ್ಮ ಧರ್ಮವನ್ನು ಪರಿತ್ಯಜಿಸದಿದ್ದರೆ ಅವರಂತಹ ಮನುಷ್ಯನು ಸಿಕ್ಕುವುದೇ ದುರ್ಲಭವಾಗುತ್ತಿತ್ತು. ಆದರೆ ಸರದಾರತನದ ಮೋಹದಲ್ಲಿಯೂ, ರೋಷನ ಬೇಗಮಳ ಪ್ರೇಮದಲ್ಲಿಯೂ ಸಿಕ್ಕಿಬಿದ್ದು ಅವರು ಮುಸಲ್ಮಾನರಾದರು. ಆದರೂ ಅವರ ಸ್ವಭಾವವು ಎಷ್ಟು ಸರಳವೆಂದು ಹೇಳಲಿ! ಅವರು ಸಾಕ್ಷಾತ್ ರಾಮಚಂದ್ರನ ಅವತಾರವೇ!"

**ಮರಾಟ:**—ನಾಯಕಸಾಹೇಬ, ಈ ರಾಮರಾವಣರಲ್ಲಿ ಎಂದಾದರೂ ಯುದ್ಧವು ಸಂಭವಿಸುವುದೋ ?

"ಅದನ್ನೋ, ಕೇಳಲೇ ಬೇಡಿರಿ!" ಎಂದು ಬಜಾಜೀಖಾನನಿಗೂ ಅಫ್ಝುಲ್‌ಖಾನನಿಗೂ ಇದ್ದ ವೈಮನಸ್ಯವನ್ನೂ, ಪ್ರತಿಯೊಂದು ಸ್ಥಳದಲ್ಲಿ ಅವರಿಬ್ಬರಿಗೂ ಆದ ಹೊಡೆದಾಟಗಳನ್ನೂ, ಅಫ್ಝುಲ್‌ಖಾನನು ಉದ್ಧತತನದಿಂದ ಅಡಿಗಡಿಗೆ ಬಜಾಜಿಯ ಅಪಮಾನವನ್ನು ಹೇಗೆ ಮಾಡುತ್ತಾನೆಂಬುದನ್ನೂ ವಿಸ್ತರವಾಗಿ ಬಣ್ಣಿಸಿದನು. ಆಮೇಲೆ ಅವನು ಮೆಲ್ಲನೆ ಹೀಗೆ ಹೇಳಿದನು:—"ನಮ್ಮ ಯಜಮಾನನು ಮುಸಲ್ಮಾನನಾಗಿದ್ದರೂ ಆತನ ಪ್ರೀತಿಯು ಮರಾಟರ ಮೇಲೆಯೇ ಹೆಚ್ಚಾಗಿದೆ. ನಿಮಗೆಂದೇ ನಾನು ಈ ಮಾತನ್ನು ಹೇಳುತ್ತೇನೆ. ನೋಡಿರಿ. ನಮ್ಮ ಸೈನ್ಯವಲ್ಲಿ ಮರಾಟ ಸೈನಿಕರೇ ಹೆಚ್ಚಾಗಿದ್ದಾರೆ. ಅವರು ನಿಮ್ಮನ್ನೂ ನಿಮ್ಮ ಹೆಂಡತಿಯನ್ನೂ ನಿಶ್ಚಯವಾಗಿಯೂ ಕೆಲಸಕ್ಕೆ ಇಟ್ಟುಕೊಳ್ಳುವರು."

ಇದನ್ನು ಕೇಳಿ ಆ ಗಂಡಹೆಂಡಿರಿಬ್ಬರಿಗೂ ಅತ್ಯಂತವಾದ ಆನಂದವಾಯಿತು. ಸೇನಾಪತಿಸಾಹೇಬರು ಮರಾಟರ ಮೇಲೆ ಹೆಚ್ಚಾಗಿ ಪ್ರೀತಿ ಮಾಡುತ್ತಾರೆಂಬುದನ್ನು ಕೇಳಿ ಆನಂದದಿಂದ ತನ್ನ ಮೈ ಉಬ್ಬಿಹೋಯಿತೆಂದು ಆ ಹೆಂಗಸು ಹೇಳಿದಳು. ಮತ್ತು 'ನಾಯಕಸಾಹೇಬರೇ, ಬೇಗಮಸಾಹೇಬರು ಸೇನಾಪತಿಸಾಹೇಬರನ್ನು ತಮ್ಮ ಕಯ್ಯಲ್ಲಿ ಇಟ್ಟುಕೊಂಡಿರಬಹುದಲ್ಲವೇ ? ಅವರಿಗೆ

ಮೋಹಿತರಾಗಿಯೇ ಸೇನಾಪತಿಗಳವರು ಮುಸಲ್ಮಾನರಾದರೆಂದು ನೀವು ಮೊದಲು ಹೇಳಿದಿರಷ್ಟೇ ? ಅಂಪಮೇಲೆ ಮರಾಟರಿಗೆ ಆಶ್ರಯಕೊಟ್ಟರೆ ಬೇಗಮುಸಾಹೇಬರ ಮನಸ್ಸಿಗೆ ನೆಟ್ಟಗಾಗುವುದೋ ? ಮಹಾರಾಷ್ಟ್ರದಾಸಿಯರಿಗಿಂತಲೂ ಮುಸಲ್ಮಾನದಾಸಿಯರನ್ನೇ ಅವರು ಹೆಚ್ಚಾಗಿ ಪ್ರೀತಿಸಬಹುದಲ್ಲವೇ ? ' ಎಂದಳು. ಇಷ್ಟು ಸುಂದರಿಯಾದ ಹೆಂಗಸು ತನ್ನೊಡನೆ ಮಾತಾಡುತ್ತಿದ್ದುದನ್ನು ನೋಡಿ ನಾಯಕಸಾಹೇಬನು ಉಬ್ಬುಬ್ಬಿ ಮಾತನಾಡಲಾರಂಭಿಸಿದನು. "ನೀವು ಆ ಯೋಚನೆಯನ್ನೇ ಮಾಡಬೇಡಿರಿ. ಮೊದಲು ಮೊದಲು ಬೇಗಮುಸಾಹೇಬರು ಹಾಕಿದ ಅಡ್ಡಗೆರೆಯನ್ನು ಖಾನಸಾಹೇಬರು ದಾಟುತ್ತಿದ್ದಿಲ್ಲ. ಆದರೆ ಈಗಿನ ಸ್ಥಿತಿಯಾದರೋ ಬೇರೆಯೇ ಆಗಿದೆ– " ಇಷ್ಟು ಮಾತನಾಡಿ ಹವಾಲದಾರನು ನಾಲಿಗೆಯನ್ನು ಕಚ್ಚಿದನು.

ಅನಂತರ ಆ ಹೆಂಗಸು ಪ್ರೇಮಕಟಾಕ್ಷದಿಂದ ಹವಾಲದಾರನನ್ನು ನೋಡುತ್ತ ಮಾತನಾಡಿದಳು– "ಇದೇನು ನಾಯಕಸಾಹೇಬರೇ, ಹೀಗೇಕೆ ಸಂಕೋಚಬಡುವಿರಿ ? ನಾವೇನು ಪರಕೀಯರೇ ? ನಾಲ್ಕಾರು ದಿವಸಗಳಲ್ಲಿ ನಾವೂ ನಿಮ್ಮವರೇ ಆಗುವೆವಲ್ಲವೇ ? ಇದೇ ನಮ್ಮ ಮೇಲಿನ ಪ್ರೇಮವೇನು ? ನಾಯಕಸಾಹೇಬರೇ, ನನ್ನನ್ನು ಚೆನ್ನಾಗಿ ನೋಡಿರಿ. ನಿಜವಾಗಿಯೂ ನನ್ನಮೇಲೆ ನಿಮ್ಮ ವಿಶ್ವಾಸವಿದೆಯೋ ಇಲ್ಲವೋ ಹೇಳಿರಿ. " ಈ ಸಮಯದಲ್ಲಿ ಆ ಹೆಂಗಸಿನ ಮಧುರವಾದ ಅಭಿನಯವನ್ನು ನೋಡಿ ನಾಯಕಸಾಹೇಬನಿಗೆ ಹುಚ್ಚೇ ಹಿಡಿಯಿತು. ಆಗಳವನು ಮಾತನಾಡಿದನು– "ಹಾಗಲ್ಲ, ಹಾಗಲ್ಲ; ಈ ಕಿವಿಯ ಮಾತು ಆ ಕಿವಿಗೆ ಬಿದ್ದರೆ ಕೇವಲ ಹೊಟ್ಟೆಯ ಮೇಲೆಯೇ ಅಲ್ಲ; ಪ್ರಾಣದ ಮೇಲೆಯೂ ಗದೆಯು ಬರುವುದು. ಆದರೆ ನಿಮ್ಮ ಮೇಲೆ ಯಾರ ವಿಶ್ವಾಸವು ತಾನೆ ನೆಲೆನಲಿಕ್ಕಿಲ್ಲ ! ನಾನು ಹೇಳುವುದೇನಂದರೆ.........."

" ಈ ಹೆಂಗಸು ಯಾರ ಮುಂದಾದರೂ ಈ ಸಂಗತಿಯನ್ನು ಹೇಳುವಳೋ ಏನೋ ! ಎಂದು ನಿಮಗೆ ಅನುಮಾನವೇನು ? " ಎಂದು ಆ ಹೆಂಗಸು ಒಯ್ಯಾರದಿಂದ ನಡುವೇ ಮಾತನಾಡಿದಳು– "ಛೀ, ಛೀ, ಹಾಗಲ್ಲ ! " ಎಂದು ಸುಮ್ಮನೆ ಸಿಟ್ಟಾಗದಿರುವುದಕ್ಕಾಗಿ ನಾಯಕಸಾಹೇಬನು ಆಕೆಗೆ ವಿನಂತಿಯನ್ನು ಮಾಡಿಕೊಂಡನು. ಆದರೆ ಆ ಹೆಂಗಸು ತನ್ನ ಮೊಗವನ್ನು ಬೇರೆ ಕಡೆಗೆ ತಿರುಗಿಸಿದಳು. ತನ್ನ ಮೇಲೆ ಅವಳು ಸಿಟ್ಟಾದುದನ್ನು ತಿಳಿದು ನಾಯಕಸಾಹೇಬನ ಜೀವವು ತಳಮಳಿಸುತ್ತಿತ್ತು. ಆಗ ಅವನು ಮೆಲ್ಲನೆ ಹೀಗೆ ಹೇಳಿದನು– "ಇತ್ತಿತ್ತಲಾಗಿ

ಬೇಗಮುಸಾಹೇಬರು ಅಫ್‌ಝುಲ್‌ಖಾನನ ಕಯ್ಯಲ್ಲಿ ಸಿಕ್ಕಂತೆ ತೋರುತ್ತದೆ. ಆದುದ ರಿಂದ ಸೇನಾಪತಿಸಾಹೇಬರ ವೃತ್ತಿಯು ಈಗ ಸ್ವಲ್ಪ ಚಂಚಲವಾಗಿದೆ. ” ಇಷ್ಟು ಮಾತನಾಡಿ ಯಾರಿಗಾದರೂ ಈ ಮಾತು ಕೇಳಿಸಿತೋ ಏನೋ ಎಂಬ ಶಂಕೆ ಯಿಂದ ಸುತ್ತುಮುತ್ತು ನೋಡಿದನು ! ಆಗ ಆ ಹೆಂಗಸು ನಸುನಕ್ಕು ಮಾತಾಡಿ ದಳು— “ಸುಮ್ಮನೇ ಹೆದರುತ್ತೀರೇಕೆ ? ಇಲ್ಲಿ ಯಾರೂ ಇಲ್ಲ ! ನಮ್ಮವರಿಗಾದರೂ ಈ ಮಾತು ಕೇಳಿಸಿತೋ ಇಲ್ಲವೋ ಸಂದೇಹವೇ ಇದೆ. ಆದರೆ ಅವರು ಸ್ವಲ್ಪ ಭ್ರಮಿಷ್ಟರು; ನೋಡಿರಿ! ಎತ್ತ ಕಡೆಗೋ ನೋಡುತ್ತ ನಿಂತುಕೊಂಡು ಬಿಟ್ಟಿದ್ದಾರೆ.”

ಹವಾಲದಾರನು ನೋಡಿದನು. ನಿಜವಾಗಿಯೂ ಆ ಮರಾಟನು ಇವರಿ ಬ್ಬರ ಮಾತಿನ ಕಡೆಗೆ ಲಕ್ಷ್ಯಗೊಡದೆ ಬೇರೊಂದು ಕಡೆಗೆ ನೋಡುತ್ತ ನಿಂತು ಕೊಂಡಿದ್ದನು. ಆದುದರಿಂದ ಈ ರಮಣಿಯ ಸ್ಪರ್ಶಾನುಭವವನ್ನು ಸ್ವಲ್ಪಮಟ್ಟಿ ಗಾದರೂ ತೆಗೆದುಕೊಳ್ಳಬೇಕೆಂಬ ಅನಿವಾರ್ಯವಾದ ಇಚ್ಛೆಯು ನಾಯಕಸಾಹೇಬ ನಲ್ಲಿ ಉತ್ಪನ್ನವಾಯಿತು. ಆದರೆ ಅದು ಸಾಧಿಸುವುದು ಹೇಗೆ ! ನಾಯಕ ಸಾಹೇ ಬನು ಇದನ್ನೇ ಯೋಚಿಸುತ್ತಿದ್ದನು. ಇಷ್ಟರಲ್ಲಿ ಖಾನನ ಕಡೆಯಿಂದ ಒಬ್ಬ ಶಿಪಾಯಿಯು ಬಂದು, ಆ ಮರಾಟ ಗಂಡಹೆಂಡಿರಿಬ್ಬರನ್ನೂ ತಮ್ಮ ಕಡೆಗೆ ಕಳಿಸಿಕೊಡುವುದಕ್ಕಾಗಿ ಖಾನಸಾಹೇಬರು ಅಪ್ಪಣೆ ಮಾಡಿದ್ದಾರೆಂದು ಹೇಳಿದನು. ಆದುದರಿಂದ ನಾಯಕಸಾಹೇಬನಿಗೆ ನಿರಾಶೆಯಾಯಿತು. ಆದರೆ ಆ ಗಂಡಹೆಂಡಿರು ಸೇನಾಪತಿಸಾಹೇಬರ ಡೇರೆಯಲ್ಲಿ ಹೋಗುವುದಕ್ಕಾಗಿ ಸಿದ್ಧರಾದ ಮೇಲೆ ಆತನು ಆ ಹೆಂಗಸಿನ ಸೆರಗನ್ನು ಮುಟ್ಟದೆ ಇರಲಿಲ್ಲ. ಅಷ್ಟರಿಂದಲೇ ಆ ಅಲ್ಪನು ಸ್ವಲ್ಪ ಸಮಾಧಾನವನ್ನೂ ಹೊಂದಿದನು.

ಮರಾಟರ ಆ ದಾಂಪತ್ಯಕ್ಕೂ ಖಾನನಿಗೂ ಭೆಟ್ಟಿಯಾದ ಪ್ರಸಂಗವು ಇದೇನು ಮೊದಲನೆಯದಾಗಿರಲಿಲ್ಲ. ಎಷ್ಟೋ ಸಾರೆ ಅವರಿಬ್ಬರನ್ನು ತನ್ನ ಡೇರೆಗೆ ಕರೆಯಿಸಿಕೊಂಡು ಹಲವು ತರದಿಂದ ವಿಚಾರ ಮಾಡಿದ್ದನು. “ನಾವು ತಮ್ಮಲ್ಲಿ ಸೇವಾವೃತ್ತಿಯಿಂದಿರುವುದಕ್ಕೋಸ್ಕರವಾಗಿಯೇ ಬಂದಿದ್ದೇವೆ- ಒಂದು ವೇಳೆ ನೀವು ನಮ್ಮ ಮೇಲೆ ವಿಶ್ವಾಸವಿಡದಿದ್ದರೆ ಉಪಾಯವಿಲ್ಲ. ” ಎಂದು ಅವರು ಹೇಳುತ್ತಿದ್ದರು. “ಯಾವನು ಗುಪ್ತಚಾರನೋ ಆತನು ಒಬ್ಬನೇ ಬರುವನು. ಇಂತಹ ಸುಂದರಿಯಾದ ಹೆಂಡತಿಯನ್ನು ಸಂಗಡ ಕರೆದುಕೊಂಡು ಮುಸಲ್ಮಾನರ ಶಿಬಿರದಲ್ಲಿ ಯಾವನಾದರೂ ಕಾಲನ್ನಿಕ್ಕುವದುಂಟೇ ? ” ಎಂದು ಆ ಮರಾಟನು ಅನ್ನುತ್ತಿದ್ದನು. ಈ ಮಾತಿನಲ್ಲಿ ಬಹುಮಟ್ಟಿಗೆ ನಿಜಾಂಶವಿದೆಯೆಂದು ಖಾನನಿಗೆ ಅನಿಸುತ್ತಿತ್ತು. “ದರಿದ್ರರಾದ ಮರಾಟರಲ್ಲಿ ಕೆಲಸಕ್ಕೆ ನಿಲ್ಲುವುದಕ್ಕಿಂತಲೂ

ಶ್ರೀಮಂತರಾದ ಮುಸಲ್ಮಾನಸರದಾರರಲ್ಲಿ ಇರುವುದು ಹೆಚ್ಚು ಲಾಭಕರವಾದುದು" ಎಂಬ ವಾಡಿಕೆಯ ಉತ್ತರವನ್ನೇ ಆ ಸ್ತ್ರೀಯು ಮೇಲಿಂದ ಮೇಲೆ ಕೊಡುತ್ತಿದ್ದಳು. ಮರಾಟನು ತನ್ನ ಹೆಸರು 'ಮಾಲ್ಯಾ ' ಎಂದೂ, ಆ ಹೆಂಗಸು ತನ್ನ ಹೆಸರು 'ಮಥೂ' ಎಂದೂ ಖಾನನಿಗೆ ಹೇಳಿದ್ದರು. ಖಾನನಿಗೆ ಇದರಿಂದ ಅರ್ಥಬೋಧ ವೇನೂ ಆಗಲಿಲ್ಲ; ಆದರೆ ಆ ಹುಡುಗೆಯನ್ನು ಹೆಚ್ಚು ಹೆಚ್ಚಾಗಿ ನೋಡಿದಂತೆ ಖಾನನಿಗೆ ತನ್ನ ಪ್ರಥಮಾಶ್ರಮದ ಪತ್ನಿಯು ನೆನಪಾಗುತ್ತಿದ್ದಳು; ಮತ್ತು ಈ ಹುಡುಗೆಯು ಅವಳ ಮಗಳೇ ಆಗಿರಬಹುದೋ ಏನೋ ಎಂಬ ಶಂಕೆಯು ಅವ ನಲ್ಲಿ ಉತ್ಪನ್ನವಾಗುತ್ತಿತ್ತು. ಅವನು ಎಷ್ಟು ಪರಿಯಿಂದ ವಿಚಾರಿಸಿದರೂ ನಿಜ ವಾದ ಸಂಗತಿಯು ಆತನಿಗೆ ತಿಳಿದು ಬರಲಿಲ್ಲ. ತಮ್ಮ ಜಾತಿಯ ವಿಷಯವಾಗಿಯೂ ಇರತಕ್ಕ ಸ್ಥಳದ ವಿಷಯವಾಗಿಯೂ ಅವರು ಹೇಳಿದ ಸಂಗತಿಯಿಂದ ನಿಂಬಾಳ ಕರರ ಮನೆತನದವರಿಗೂ ಇವರಿಗೂ ಯಾವ ಸಂಬಂಧವೂ ಇದ್ದಂತೆ ತೋರಲಿಲ್ಲ. ಆದುದರಿಂದ ಈ ಹುಡುಗೆಯು ಯಾರೆಂಬ ವಿಷಯವಾಗಿ ಖಾನನಿಗೆ ಸಮಾಧಾನವೇ ಆಗಲಿಲ್ಲ.

ಖಾನನು ಬಹಳ ವಿಚಾರದಲ್ಲಿ ಬಿದ್ದನು. ಇವಳಿಗೂ ತನ್ನ ಮನೆತನಕ್ಕೂ ಯಾವ ಸಂಬಂಧವೂ ಇಲ್ಲದಿದ್ದ ಮೇಲೆ, ಇವಳಿಗೂ ತನ್ನ ಪತ್ನಿಗೂ ಇಷ್ಟೊಂದು ಹೋಲಿಕೆಯು ಯಾಕೆ ಇರಬೇಕು? ಬಜಾಜೀಖಾನನ ದೃಷ್ಟಿಯಿಂದ ಇವಳು ಅವನ ಸಾಕ್ಷಾತ್ ಪತ್ನಿಯಂತೆಯೇ ಇದ್ದಳು. ನಡುವಿನ ಹದಿನೈದು ಹದಿ ನಾರು ವರುಷಗಳ ದೀರ್ಘಕಾಲವು ಕಳೆದು ಹೋಗಿರದಿದ್ದರೆ ತನ್ನ ಹೆಂಡತಿ ಯೆಂದೇ ಇವಳನ್ನು ಎವೆಗೆ ಅಪ್ಪಿಕೊಳ್ಳುತ್ತಿದ್ದನು. ಆದರೆ ಈಗ ಅವಳು ಪತ್ನಿ ಯೆಂದು ಹೇಳುವುದಕ್ಕೆ ಖಾನನಿಗೆ ಧೈರ್ಯವಾಗಲಿಲ್ಲ. ಯಾಕಂದರೆ ಇವಳು ತರುಣಿಯಾಗಿದ್ದಳು; ಆತನ ಹೆಂಡತಿಯಾದರೂ ತರುಣಿಯಾಗಿದ್ದಳು. ಆದರೆ ಆ ಮಾತಿಗೆ ಈಗ ಹದಿನೈದು ಹದಿನಾರು ವರುಷಗಳು ಕಳೆದು ಹೋಗಿದ್ದುವಷ್ಟೇ? ಒಂದೊಂದು ವೇಳೆ ಖಾನನಿಗೆ ಇನ್ನೊಂದು ತರದ ಭ್ರಮೆಯು ಉತ್ಪನ್ನವಾಗು ತ್ತಿತ್ತು. ತಾನು ಮುಸಲ್ಮಾನನಾದುದೂ, ರೋಷನಬೇಗಮಳೊಡನೆ ಮದುವೆ ಮಾಡಿಕೊಂಡುದೂ, ಶಿವಾಜಿ ಭೋಸಲೆಯ ಬಂಡಾಯವನ್ನು ಮುರಿಯುವುದಕ್ಕೆ ಬಂದುದೂ ಒಂದು ದೊಡ್ಡ ಸ್ವಪ್ನವೆಂಬಂತೆ ಅವನಿಗೆ ತೋರಲಾರಂಭವಾಯಿತು. ನಿಜವಾಗಿಯೂ ತಾನು ಬಜಾಜೀ ನಿಂಬಾಳಕರನು; ಇವಳು ತನ್ನ ಪತ್ನಿಯು; ಈ ಸಂಗತಿಯೇ ನಿಜ! ಎಂದು ಆತನಿಗೆ ಅನಿಸುತ್ತಿತ್ತು. ಭಯಂಕರವಾದ ಈ ಸ್ವಪ್ನದೊಳಗಿಂದ ತಾನು ಇದೇ ಈಗ ಎಚ್ಚತ್ತಿರುವೆನಾದುದರಿಂದ ತನಗೆ ಈ

ಪ್ರಕಾರದ ಭ್ರಮೆಯು ಉತ್ಪನ್ನವಾಯಿತೆಂಬ ತಿಳಿದು ಕಣ್ತೆರೆದು ಆ ತರುಣಿಯನ್ನು ನೋಡಬೇಕೆನ್ನುವಷ್ಟರಲ್ಲಿ ತನ್ನ ಉದ್ದವಾದ ಗಡ್ಡವು ಆತನಿಗೆ ಗೋಚರವಾಗುತ್ತಿತ್ತು. ಹೀಗಾಗಿ ನಿಜವಾದ ಸಂಗತಿಯು ಯಾವುದೆಂಬುದೇ ಆತನಿಗೆ ತಿಳಿಯದಾಯಿತು !

ಆ ಸ್ತ್ರೀಯನ್ನು ನೋಡಿದಂದಿನಿಂದ ಖಾನನಿಗೆ ಮರುಳು ಹಿಡಿಯಿತು. ಅವನು ಆಕೆಯನ್ನು ಪರಿ ಪರಿಯಿಂದ ಕೇಳಿ ನೋಡಿದನು; ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಆದರೂ ಅದರಿಂದ ಖಾನನ ಮನಸ್ಸಿನಲ್ಲುಂಟಾದ ಭ್ರಮೆಯು ಮಾತ್ರ ದೂರವಾಗಲಿಲ್ಲ. ಆತನು ಅವರನ್ನು ಅಡಿಗಡಿಗೆ ತನ್ನ ಡೇರೆಗೆ ಕರೆಯಿಸಿಕೊಂಡು ಅನೇಕ ಪ್ರಶ್ನೆಗಳನ್ನು ಕೇಳುತ್ತಿದ್ದನು; ಒಮ್ಮೊಮ್ಮೆ ಆ ತರುಣಿಯೊಬ್ಬಳನ್ನೇ ಕರೆಯಿಸುತ್ತಿದ್ದನು. ಅವಳು ಆತನ ಎದುರಿನಲ್ಲಿದ್ದರೆ ಅವನಿಗೆ ಅಪರಿಮಿತ ಸುಖವಾಗುತ್ತಿತ್ತು; ಅನೇಕ ಘಂಟೆಗಳ ಕಾಲ ಅವಳನ್ನೇ ನೋಡುತ್ತ ನಿಂತುಕೊಳ್ಳುತ್ತಿದ್ದನು. ಅವನಿಗೆ ಹಿಂದಿನ ಕಾಲವು ನೆನಪಾಗಿ ಆ ಸ್ವಪ್ನಮಯ ವಿಚಾರದಲ್ಲಿಯೇ ಲೀನನಾಗುತ್ತಿದ್ದನು. ಆತನು ಅವಳೊಡನೆ ಸ್ವಲ್ಪವೇ ಮಾತಾಡುತ್ತಿದ್ದನು. ಆದರೆ ಅವಳು ತನ್ನ ಹತ್ತರ ಬಂದು ಕುಳಿತುಕೊಳ್ಳಬೇಕು; ತನ್ನ ಮೈಮೇಲೆ ಕೈಯಾಡಿಸಬೇಕು; ಬಹಳವೇನು? ಅವಳನ್ನು ಗಟ್ಟಿಯಾಗಿ ಅಪ್ಪಿಕೊಂಡು ಹಿಂದಿನ ಕಾಲವನ್ನು ಸ್ಮರಿಸಿ ಅಶ್ರುಗಳನ್ನು ಸುರಿಸಬೇಕೆಂದು ಅವನಿಗೆ ಅನಿಸುತ್ತಿತ್ತು; ಅವಳು ನಿಜವಾಗಿಯೂ ತನ್ನ ಮಗಳು; ತನ್ನ ಮಗಳಲ್ಲದಿದ್ದರೂ ತನ್ನ ಹೆಂಡತಿಯ ಮಗಳಾಗಿ ಇರಲಿಕ್ಕೇಬೇಕೆಂದು ಆತನ ಮನೋದೇವತೆಯು ಆತನಿಗೆ ಹೇಳುತ್ತಿತ್ತು.

ಖಾನನ ಈ ಚಮತ್ಕಾರಿಕವರ್ತನವನ್ನು ಕಂಡು ಸೈನ್ಯದೊಳಗಿನ ಜನರೆಲ್ಲರೂ ಪರಸ್ಪರವಾಗಿ ಈ ವಿಷಯವನ್ನು ಚರ್ಚಿಸತೊಡಗಿದರು. ಖಾನಸಾಹೇಬರು ಆ ತರುಣಿಯ ಮೋಹಪಾಶದಲ್ಲಿ ಸಿಕ್ಕಿಬಿದ್ದರೆಂದು ಎಲ್ಲರೂ ಅನ್ನಹತ್ತಿದರು. ಎಲ್ಲ ಕಡೆಯಲ್ಲಿಯೂ ಇದೇ ವಿಷಯದ ಹರಟೆಯು ಆರಂಭವಾಯಿತು. ಖಾನಸಾಹೇಬರು ಆ ಹುಡುಗಿಯೊಡನೆ ಏಕಾಂತಸಂಭಾಷಣೆಯನ್ನು ಮಾಡಲಾರಂಭಿಸಿದಂತೆ ಶಿಪಾಯಿ ಜನರಲ್ಲಿ ಆಕೆಯ ಗಂಡನ ಗೌರವವು ಹೆಚ್ಚುತ್ತಿತ್ತು, ಇವರಿಬ್ಬರೂ ಬೇಗನೇ ಖಾನನ ಅನುಗ್ರಹಕ್ಕೆ ಪಾತ್ರರಾಗುವರೆಂದು ಎಲ್ಲರೂ ತರ್ಕಿಸಿಸಿದರು; ಆದುದರಿಂದ ಉಳಿದ ಶಿಪಾಯರು ಈಗಿನಿಂದಲೇ ಇವರೊಡನೆ ಸಲಿಗೆಯಿಂದ ನಡೆದುಕೊಂಡು ಇವರ ಸ್ನೇಹವನ್ನು ಸಂಪಾದಿಸಲಿಕ್ಕೆ ಯತ್ನಿಸುತ್ತಿದ್ದರು. ಎಲ್ಲರೂ ಮೇಲಿಂದ ಮೇಲೆ ಇವರ ಡೇರೆಯ ಹತ್ತರ ಬರುತ್ತಿದ್ದರು.

ಆ ಮರಾಟನು ಮಾತ್ರವೇ ಅಲ್ಲದೆ, ಆತನ ಸುಂದರಿಯೂ ಕೂಡ ಬಂದವರೊಡನೆ ಸರಳತನದಿಂದ ಮಾತನಾಡುತ್ತ ಶಿವಾಜಿ ಭೋಸಲೆ, ಬಜಾಜೀಖಾನ ಮೊದಲಾದವರ ವಿಷಯವನ್ನೆಲ್ಲ ಚರ್ಚೆಮಾಡುತ್ತಿದ್ದಳು. ಆಕೆಯು ಗೋಷಾಪದ್ಧತಿಯನ್ನು ಬಿಟ್ಟುಬಿಟ್ಟಿದ್ದಳು. ಆದುದರಿಂದ ಇತರ ಜನರಿಗೆ ಅದು ವಿಲಕ್ಷಣವೆನಿಸಿತು. 'ಒಮ್ಮೆ ಮುಸಲ್ಮಾನರ ವಶವರ್ತಿಗಳಾಗಿ ಕೆಲಸಕ್ಕೆ ನಿಂತ ಬಳಿಕ ಆ ದರಿದ್ರರಾದ ಮರಾಟರ ನಿರರ್ಥಕವಾದ ಪದ್ಧತಿಯನ್ನು ಅನುಸರಿಸುವದರಲ್ಲಿ ಅರ್ಥವಿಲ್ಲ'ವೆಂದು ಅವಳು ಎಲ್ಲರಿಗೂ ಹೇಳಿಬಿಟ್ಟಳು. 'ಬೇಗಮುಸಾಹೇಬರ ಕಯ್ಯೊಳಗೆ ಸೇವಕಳಾಗಿ ನಿಂತಬಳಿಕ ಅವರು ಹೇಳಿದ ಕೆಲಸಗಳನ್ನು ಮಾಡುವುದಕ್ಕಾಗಿ ನಾಲ್ಕು ಕಡೆಗೆ ತಿರುಗಲೇಬೇಕಾಗುವುದು; ಆಗ ಗೋಷಾ ಪದ್ಧತಿಯನ್ನು ಇಟ್ಟುಕೊಳ್ಳುವುದರಿಂದ ಪ್ರಯೋಜನವೇನು?' ಎಂದು ಆ ಹೆಂಗಸು ಹೇಳುತ್ತಿದ್ದಳು.

ಖಾನನು ಆ ಹುಡುಗೆಯನ್ನು ಹೆಚ್ಚು ಹೆಚ್ಚಾಗಿ ಕರೆಯಿಸುತ್ತಿದ್ದಂತೆ ಇತರ ಶಿಪಾಯರೆಲ್ಲರೂ ಆಕೆಯ ಗಂಡನ ಆರ್ಜವವನ್ನು ಸಂಪಾದಿಸಹತ್ತಿದರು. ಆತನಿಗೆ ಏನಾದರೊಂದು ಕೊರತೆಯುಂಟಾದರೆ ಅದನ್ನು ಪೂರಯಿಸುವದಕ್ಕಾಗಿ ಸಾಹಾಯ್ಯಮಾಡಲು ಎಲ್ಲರೂ ಮುಂದೆ ಬರುತ್ತಿದ್ದರು. ಒಂದು ಕ್ಷುಲ್ಲಕವಾದ ಕಾರಣಕ್ಕೋಸ್ಕರವಾಗಿಯಾದರೂ ಮೊದಲು ಆತನು ಇತರಸೇವಕರ ಕಯ್ಕಾಲು ಕಟ್ಟಿಕೊಳ್ಳಬೇಕಾಗುತ್ತಿತ್ತು. ಆದರೆ ಈಗ ಆ ಮನ್ವಂತರವು ಬದಲಾಯಿತು. ಈಗ ಎಲ್ಲರೂ ಆತನ ಒಲವನ್ನು ಹಿಡಿದೇ ನಡೆಯುತ್ತಿದ್ದರು. ಇವನು ಸ್ವಲ್ಪ ದಿವಸಗಳಲ್ಲಿಯೇ ಖಾನನಿಗೆ ಅತ್ಯಂತಪ್ರಿಯಕರನಾಗುವನೆಂದು ಎಲ್ಲರೂ ತಿಳಿದುಕೊಂಡಿದ್ದರು. ಆದುದರಿಂದ ಅವರಿಬ್ಬರ ಮೇಲಿನ ಪ್ರತಿಬಂಧವು ಈಗ ಕಡಿಮೆಯಾಯಿತು; ಬೇಕಾದಾಗ ಬೇಕಾದತ್ತ ಹೋದರೂ ಅವರನ್ನು ಯಾರೂ ಕೇಳದಂತಾದರು. ಯಾಕಂದರೆ ಅವರು ಶಿಬಿರವನ್ನು ಬಿಟ್ಟು ಹೊರಗೆ ಹೋಗುವುದಿಲ್ಲವೆಂದು ಎಲ್ಲರಿಗೂ ಮನವರಿಕೆಯಾಗಿತ್ತು. ಮುಸಲ್ಮಾನರ ಸೇನಾವಿಷಯುಕವಾದ ವೃತ್ತಾಂತವು ಈ ಇಬ್ಬರಿಗೆ ಗೊತ್ತಿದ್ದಷ್ಟು ಪ್ರತ್ಯಕ್ಷಸೇನಾಪತಿಗಾದರೂ ಗೊತ್ತಿರುತ್ತಿತ್ತೋ ಇಲ್ಲವೋ ಸಂದೇಹವೇ! ಯಾಕೆಂದರೆ ಪ್ರತಿಯೊಬ್ಬನೂ ತನಗೆ ತಿಳಿದ ಎಲ್ಲ ವೃತ್ತಾಂತವನ್ನೂ ಇವರ ಮುಂದೆ ಹೇಳದೆ ಇರುತ್ತಿರಲಿಲ್ಲ!

ಆ ಮರಾಟನು ಸ್ಪಷ್ಟ ಮಾತಾಡುವ ಸ್ವಭಾವದವನಾಗಿದ್ದನು. ನಾವು ಮುಸಲ್ಮಾನರ ಅನ್ನವನ್ನು ತಿಂದಿರುವುದರಿಂದ ಅವರ ಸೇವೆಯನ್ನು ಮಾಡುವುದೇ ನಮ್ಮ ಕರ್ತವ್ಯವೆಂದು ಆತನು ಮರಾಟ ಸರದಾರರ ಮುಂದೆ ಸ್ಪಷ್ಟವಾಗಿ ಮಾತಾಡುತ್ತಿದ್ದನು. ಆದರೆ "ಅಫ್‌ಝುಲ್‌ಖಾನನಂತಹ ಉದ್ಧತರಾದ ಶಿಪಾ

ಯರು ಹಿಂದೂ ಜನರ ದೇವಾಲಯುಗಳನ್ನು ಹಾಳುಗೆಡಹುವದು, ಆಕಳುಗ ಳನ್ನು ಕೊಲ್ಲುವುದು, ಬ್ರಾಹ್ಮಣರನ್ನು ಕುಲಗೆಡಿಸುವುದು, ಹೆಂಗಸರಿಗೆ ಅವ ಮಾನ ಮಾಡುವುದು ಮೊದಲಾದ ಕೃತ್ಯಗಳನ್ನು ಮಾಡುವುದನ್ನು ನೋಡಿದರೆ ಮಾತ್ರ ಮನಸ್ಸಿಗೆ ಸಂತಾಪವಾಗುತ್ತದೆ. ನಮ್ಮ ಬಜಾಜೀಖಾನರಂತಹ ದಯಾಳುಗಳಾದ ಮುಸಲ್ಮಾನ ಸರದಾರರಿದ್ದರೆ ಅವರ ಕಯ್ಕೆಳಗೆ ಕೆಲಸ ಮಾಡು ವದಕ್ಕೆ ಯಾರೂ ಹಿಂಜರಿಯಲಾರರು. ಇತರ ಮುಸಲ್ಮಾನರು ಅತ್ಯಾಚಾರ ಗಳನ್ನು ಮಾಡುತ್ತಿರುವುದರಿಂದಲೇ ಶಿವಾಜೀಭೋಸಲೇನ ಪುಂಡಾಟಕ್ಕೆ ಇಷ್ಟೊಂದು ಅವಕಾಶವಾಗಿದೆ. ಯಾಕಂದರೆ ಗೋಬ್ರಾಹ್ಮಣರನ್ನು ಸಂರಕ್ಷಿಸ ಸುವುದೂ, ಹಿಂದೂ ಧರ್ಮವನ್ನು ಉದ್ಧಾರ ಮಾಡುವುದೂ ಆತನ ಧರ್ಮವು. ಆದುದರಿಂದಲೇ ದಿನದಿನಕ್ಕೆ ಆತನ ಪಕ್ಷವು ಬೆಳೆಯುತ್ತ ನಡೆದಿದೆ. ನಾಳೆ ಅವ ನೊಡನೆ ಕಾಳಗವು ಆರಂಭವಾದರೆ ನಮ್ಮೊಳಗಿನ ಎಷ್ಟೋ ಜನರು ಅವನನ್ನು ಹೋಗಿ ಕೂಡಿಕೊಳ್ಳಬಹುದು!" ಈ ಪ್ರಕಾರವಾಗಿ ಆತನು ಸ್ಪಷ್ಟವಾಗಿಯೇ ಮಾತನಾಡುತ್ತಿದ್ದನು.

ಇದರಿಂದ ಶಿಬಿರದಲ್ಲೆಲ್ಲ ಶಿವಾಜಿಭೋಸಲೆಯ ಪ್ರಶಂಸೆಯಾಗದೆ ಇದ್ದರೂ ಮುಸಲ್ಮಾನರ ಅತ್ಯಾಚಾರಗಳನ್ನು ಅಡಗಿಸುವುದಕ್ಕಾಗಿಯೇ ಶಿವಾಜಿಯು ಕಾಳ ಗವನ್ನು ಹೂಡಿರುವನೆಂದು ಬಜಾಜೀಖಾನನಲ್ಲಿದ್ದ ಮುಖ್ಯ ಮುಖ್ಯ ಸರದಾರರಿ ಗೆಲ್ಲ ಮನವರಿಕೆಯಾಯಿತು. "ಶಿವಾಜಿಯು ಸ್ವಾರ್ಥವನ್ನು ಸಾಧಿಸುವುದ ಕ್ಕಾಗಿ ಈ ಯುದ್ಧವನ್ನು ಆರಂಭಿಸಿಲ್ಲ; ಮುಸಲ್ಮಾನರ ಅನಾಚಾರವನ್ನು ನಿಲ್ಲಿಸ ಬೇಕೆಂಬ ಪವಿತ್ರವಾದ ಉದ್ದೇಶದಿಂದ ಅವನು ಈ ಕೆಲಸಕ್ಕೆ ಕಯ್ ಹಾಕಿ ದ್ದಾನೆ; ಮುಸಲ್ಮಾನರ ಧರ್ಮಚಛಲದಿಂದ ಮಲಿನವಾದ ಹಿಂದೂಧರ್ಮವನ್ನು ಉಜ್ವಲಗೊಳಿಸುವುದಕ್ಕಾಗಿ ಆತನು ಬಂಡಾಯವನ್ನು ಹೂಡಿದ್ದಾನೆ, ಇದರಲ್ಲಿ ಆತನ ಸ್ವಾರ್ಥವು ಎಳ್ಳಷ್ಟು ಇಲ್ಲ; ಯಾಕಂದರೆ ಈ ಯುದ್ಧಕ್ಕೋಸ್ಕರ ಆತನು ತನ್ನ ದ್ರವ್ಯವನ್ನು ನೀರಿನಂತೆ ವೆಚ್ಚಮಾಡಿದ್ದಾನೆ; ಇದೆಲ್ಲಕ್ಕೂ ಆತನಿಗೆ ದೊರೆತ ಪ್ರತಿಫಲವೇದರೆ, ಬಂಡುಗಾರನೆಂಬ ಪದವಿಯು ! ಈ ಶಿವಾಜಿಯಿಂದ ನಿಜವಾ ಗಿಯೂ ಹಿಂದುಸ್ಥಾನದಲ್ಲಿ ಸ್ವರಾಜ್ಯವು ಸ್ಥಾಪಿಸಲ್ಪಡಬಹುದೋ ! ನಿಜವಾಗಿಯೂ ಆತನು ಹಿಂದೂಧರ್ಮವನ್ನು ಉದ್ಧಾರಮಾಡಬಹುದೋ ! ಹಾಗೆ ಆತನು ಮಾಡಿ ದರೆ ನಮ್ಮ ಗತಿಯೇನು ? ನಮ್ಮ ಬೆಲೆಯೇನು ? ನಾವಂತೂ ಮೂಲವೃಕ್ಷವನ್ನೇ ಉಚ್ಛೇದಿಸಲು ಸಿದ್ಧವಾದ ಕೊಡಲಿಯ ಕಾವಾಗಿರುವೆವು ! ನಾವು ಯಾರು ? ಆಕಳವನ್ನು ಕಡಿಯುವವರಿಗೆ ಸಹಾಯಕರು ! ನಾವು ಯಾರು ? ಮೂರ್ತಿಯನ್ನು

ಒಡೆಯುವವರಿಗೆ ನೆರವಾಗುವವರು ! ವ್ಯರ್ಥ ! ವ್ಯರ್ಥ !! ನಮ್ಮ ಜೀವಿತವು ವ್ಯರ್ಥವೇ !! ಧಿಕ್ಕಾರವಿರಲಿ ನಮ್ಮ ಜನ್ಮಕ್ಕೆ !!! ಹಾಗಾದರೇನು ? ಶಿವಾಜಿಯನ್ನು ಕೂಡಿಕೊಳ್ಳಬೇಕೇ ? ಇದೇನು ? ವಿಪರೀತವಿಚಾರ ! ಆತನು ಯುದ್ಧದಲ್ಲಿ ಪರಾಭವವನ್ನು ಹೊಂದಿದರೆ ಅವನೊಡನೆ ನಾವು ಕೊಲೆಗಂಬಕ್ಕೆ ತೂಗಾಡಬೇಕಾದೀತು ! ” ಖಾನನ ಸೈನ್ಯದೊಳಗಿನ ಪ್ರತಿಯೊಬ್ಬ ದಂಡಾಳಿನ ಮನಸ್ಸಿನಲ್ಲಿಯೂ ಇದೇ ತರದ ವಿಚಾರಗಳು ಬರುತ್ತಿದ್ದುವು.

ಖಾನನು ಆ ಮರಾಟಸ್ತ್ರೀಗೆ ಅತ್ಯಂತಮೋಹಿತನಾಗಿ ಹೋದನಾದುದರಿಂದ ಆಕೆಯ ಗಂಡನಿಗೆ ಸಂಪೂರ್ಣಸ್ವಾತಂತ್ರ್ಯವು ಸಿಕ್ಕಿತು; ಇಷ್ಟೇ ಅಲ್ಲ; ಖಾನನ ಸ್ವಂತ ಮನೆಯಲ್ಲಿಯೇ ಆತನು ಭೇದೋಪಾಯದ ಬೀಜವನ್ನು ಊರಿದನು ! ವಿಜಾಪುರವನ್ನು ಬಿಟ್ಟಂದಿನಿಂದ ಪ್ರತಿಯೊಂದು ಸ್ಥಳದಲ್ಲಿ ಅಫ್ಝುಲ್ ಖಾನನಿಗೂ ಬಜಾಜೀಖಾನನಿಗೂ ಜಗಳಗಳು ನಡೆಯುತ್ತಿದ್ದುವು. ಅಫ್ಝುಲ್ ಖಾನನು ದೇವಾಲಯವನ್ನು ಹಾಳು ಮಾಡುವುದಕ್ಕೆ ಸಿದ್ಧನಾಗಲು ಬಜಾಜಿಯು ಅದಕ್ಕೆ ಪ್ರತಿಬಂಧ ಮಾಡುತ್ತಿದ್ದನು. ಆದುದರಿಂದ ಬಜಾಜೀಖಾನನು ಹಿಂದೂಧರ್ಮದ ಮೇಲೆಯೂ ಮರಾಟರ ಮೇಲೆಯೂ ಹೆಚ್ಚು ಪ್ರೀತಿಯುಳ್ಳವನಾಗಿದ್ದಾನೆಂಬ ಅಫ್ಝುಲ್ ಖಾನನ ಕಲ್ಪನೆಯು ದೃಢವಾಗುತ್ತ ಬಂತು. ಆತನು ಹೆಜ್ಜೆಹೆಜ್ಜೆಗೆ ರೋಷನಬೇಗಮಳಿಗೆ ಭೆಟ್ಟಿಯಾಗಿ ಇದೇ ಮಾತನ್ನು ಅವಳ ಮನಸ್ಸಿನಲ್ಲಿ ನೆಲೆಗೊಳಿಸುತ್ತಿದ್ದನು. ಮತ್ತು ಈಗ ಬಜಾಜೀಖಾನನು ಮೊದಲಿನಂತೆ ತನ್ನ ಮೇಲೆ ಪ್ರೇಮ ಮಾಡುವುದಿಲ್ಲವೆಂದು ರೋಷನಬೇಗಮಳಿಗೆ ಅನಿಸಲಾರಂಭವಾಯ್ತು. ರೋಷನ ಬೇಗಮಳಿಂದ ತನಗೆ ಸಂತತಿಯುಂಟಾಗಲಿಲ್ಲವೆಂದು ಅವಳ ಮೇಲಿನ ಬಜಾಜಿಯ ಪ್ರೇಮವು ಸ್ವಲ್ಪಮಟ್ಟಿಗೆ ಶಿಥಿಲವಾಗಿದ್ದರೂ ಆಗಿರಬಹುದು; ಆದರೆ ರೋಷನಳು ಖಾನನ ಮನಸ್ಸನ್ನು ತನ್ನ ಅಧೀನವಲ್ಲಿಟ್ಟುಕೊಳ್ಳುವದಕ್ಕೆ ಪ್ರಯತ್ನವನ್ನು ಬಲಪಡಿಸಿದಹಾಗೆಲ್ಲಾ, ಅವಳ ಪಾಶವು ಸಡಿಲವಾಗಲಾರಂಭವಾಯಿತು ! ಆಕೆಯು ಆಡಂಬರದಿಂದ ತನ್ನ ಸಂಗಡ ಹೊರಟು ಬಂದುದು ಬಜಾಜೀಖಾನನಿಗೆ ಸೇರಿಕೆಯಾಗಲಿಲ್ಲ. ಯಾಕಂದರೆ ಅವಳಿಂದ ಅವನಿಗೆ ಬಹಳ ತೊಂದರೆಯಾಯಿತು. ಬಜಾಜಿಯ ಮನಸ್ಸಿನ ಸ್ಥಿತಿಯು ವಿಚಿತ್ರವಾಯಿತು. ಯುದ್ಧದ ಹೊಣೆಗಾರಿಕೆಯು ಮೈಮೇಲೆ ಇದ್ದುದರಿಂದ ಆತನಿಗೆ ಬೇಗಮಳ ಪ್ರೀತಿಯಾಚನೆಯನ್ನು ಮಾಡುವುದಕ್ಕೆ ಅವಕಾಶವೇ ಸಿಕ್ಕುತ್ತಿದ್ದಿಲ್ಲ. ಆದರೆ ರೋಷನಳು ಅದನ್ನು ವಿಪರೀತವಾಗಿ ಭಾವಿಸುತ್ತಿದ್ದಳು. ಈ ಪ್ರಕಾರದಿಂದ ಬಜಾಜಿಗೂ

ರೋಷನನಳಿಗೂ ಪರಸ್ಪರವಾಗಿ ಹುಟ್ಟಿದ ಸೂಕ್ಷ್ಮವಾದ ಬೆಂಕಿಯ ಕಿಡಿಯಲ್ಲಿ ಎಣ್ಣೆಯನ್ನು ಸುರಿವಿ ಪ್ರಜ್ವಲಿತವಾಗೆ ಮಾಡಲು ಅಫ್‌ಝುಲ್‌ಖಾನನು ಸಿದ್ಧನಾಗಿಯೇ ಇದ್ದನು. ಬಜಾಜಿಯು ಹಿಂದೂಧರ್ಮವನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿರುವುದರಿಂದಲೇ ನಿನ್ನ ಮೇಲಿನ ಆತನ ಪ್ರೇಮವು ಕಡಿಮೆಯಾಗಿದೆಯೆಂದು ಅಫ್‌ಝುಲ್‌ಖಾನನು ರೋಷನಳ ಮನಸ್ಸಿನಲ್ಲಿ ದೃಢವಾಗುವಂತೆ ಮಾಡುತ್ತಿದ್ದನು. ಅಫ್‌ಝುಲ್‌ಖಾನನೂ ರೋಷನಳೂ ವೇಲಿಂದ ಮೇಲೆ ಏಕಾಂತದಲ್ಲಿ ಭೆಟ್ಟಿಯಾಗಲಾರಂಭಿಸಿದರು. ಈ ಪ್ರಕಾರದಿಂದ ಆತನಿಗೆ ಭೆಟ್ಟಿಯಾಗಿ ಬಂದ ಬಳಿಕ ರೋಷನಳು 'ನೀವು ಹಿಂದೂಧರ್ಮವನ್ನೇ ನಿಜವಾಗಿ ಪ್ರೀತಿಸುತ್ತೀರಿ!' ಎಂಬುದಾಗಿ ಬಜಾಜೀಖಾನನಿಗೆ ತೊಂದರೆ ಕೊಡಲಾರಂಭಿಸಿದಳು. ಬಜಾಜೀಖಾನನಿಗೆ ಈ ಸಂಗತಿಯೆಲ್ಲವನ್ನೂ ಮೌನದಿಂದ ಸಹಿಸಿಕೊಳ್ಳುವುದು ಅಶಕ್ಯವಾಗಿತ್ತು.

ಅಫ್‌ಝುಲ್‌ಖಾನನು ಈ ಯುದ್ಧದಲ್ಲಿ ಅಧಿಕಪ್ರಸಂಗಿತ್ವವನ್ನು ತೋರಿಸಲಾರಂಭಿಸಿದಂದಿನಿಂದ ಬಜಾಜೀಖಾನನು ಆತನ ಮೇಲೆ ಗುಪ್ತಚಾರರನ್ನು ನಿಯಮಿಸಿದ್ದನು. ಆದುದರಿಂದ ಅಫ್‌ಝುಲ್‌ಖಾನನು ರೋಷನ ಬೇಗಮಳೊಡನೆ ಹೆಚ್ಚಾಗಿ ಸಲುಗೆಯನ್ನಿಡುತ್ತ ಬಂದಿರುವ ಸಂಗತಿಯು ಆತನ ಕಣ್ಣಿನಲ್ಲಿ ಚುಚ್ಚಲಾರಂಭವಾಯಿತು. ಬೇಗಮಳೂ ಅಫ್‌ಝುಲ್‌ಖಾನನೂ ಬಹಳ ಹೊತ್ತಿನ ವರೆಗೂ ಏಕಾಂತದಲ್ಲಿ ಇರಲಾರಂಭಿಸಿದರು; ಇದರಿಂದ ಬೇಗಮಸಾಹೇಬರು ಅಫ್‌ಝುಲ್‌ಖಾನರಿಗೆ ವಶವಾಗಿದ್ದಾರೆಂದು ಎಲ್ಲಕಡೆಯಲ್ಲಿಯೂ ಸುದ್ದಿಯು ಹರಡಿತು. ಆದರೆ ಈ ಸುದ್ದಿಯನ್ನು ಬಜಾಜೀಖಾನನ ಕಿವಿಯ ಮೇಲೆ ಹಾಕುವ ಧೈರ್ಯವು ಯಾರಿಗೆ ಉಂಟಾಗಬೇಕು? ಬಜಾಜಿಗೆ ಯಾರೂ ಈ ಸಂಗತಿಯನ್ನು ಹೇಳದೆ ಇದ್ದರೂ ಆತನೇನು ಕುರುಡನಾಗಿರಲಿಲ್ಲ. ಅಫ್‌ಝುಲ್‌ಖಾನನು ರಾಕ್ಷಸೀವೃತ್ತಿಯ ಮನುಷ್ಯನಾದುದರಿಂದ ಅವರಿಬ್ಬರ ಏಕಾಂತವೇ ಅವನಿಗೆ ರುಚಿಸುತ್ತಿರಲಿಲ್ಲ. ಒಂದಾನೊಂದು ಕಾಲದಲ್ಲಿ ಅಫ್‌ಝುಲ್‌ಖಾನನು ಬೇಗಮಳ ಮೇಲೆ ಕಣ್ಣನ್ನಿಟ್ಟಿದ್ದ ಸಂಗತಿಯೂ, ಅದಿಲಶಹನು ಅವನ ಬೇಡಿಕೆಯನ್ನು ತಿರಸ್ಕರಿಸಿ ರೋಷನಳನ್ನು ತನಗೆ ವಿವಾಹ ಮಾಡಿಕೊಟ್ಟ ಸಂಗತಿಯೂ ಆತನಿಗೆ ನೆನಪಾದುವು. ಆದರೆ ಆತನು ಬಾಯ್ಬಿಚ್ಚಿ ಯಾವುದನ್ನೂ ಮಾತಾಡುವಂತಿದ್ದಿಲ್ಲ- ಒಳಗೆ ಹೆಗ್ಗಣವನ್ನಿಟ್ಟು ಮೇಲಿನಿಂದ ಗುದ್ದು ಮುಚ್ಚುವಂತೆ ಆತನ ಸ್ಥಿತಿಯಾಗಿತ್ತು!

ಈ ವಿಷಲಿಪ್ತಶಲ್ಯವು ಆತನ ಹೃದಯದಲ್ಲಿ ಅನಂತವಾದ ಯಾತನೆಗಳನ್ನು ಉಂಟುಮಾಡುತ್ತಿತ್ತು. ಈ ಶಲ್ಯದ ಹೊಡೆತದಿಂದ ಆತನ ಮನಸ್ಸು ಗಾಯಪಟ್ಟಿತು. ಆದುದರಿಂದ ಆ ಮರಾಟ ಹೆಣ್ಣುಮಗಳೊಡನೆ ಆತನು ತನ್ನ ಕಾಲವನ್ನು ಕಳೆಯಹತ್ತಿದನು. ಯಾಕೆಂದರೆ ಅವಳು ಹತ್ತರದಲ್ಲಿದ್ದರೆ ಆತನಿಗೆ ತನ್ನ

ಪ್ರಿಯತಮೆಯು ನೆನಪಾಗುತ್ತಿತ್ತು; ಆಕೆಯ ಸರಳವೂ ಪವಿತ್ರವೂ ಆದ ಪ್ರೇಮವನ್ನು ರೋಷನಬೇಗಮಳ ಮಾದಕಪ್ರೇಮದೊಡನೆ ಹೋಲಿಸಿ ನೋಡುವುದರಲ್ಲಿ ಆತನ ಕಾಲವು ಕಳೆದುಹೋಗುತ್ತಿತ್ತು; ಈ ವಿಷದಶಲ್ಯವು ಆತನ ಹೃದಯದಲ್ಲಿ ನೆಟ್ಟಿರದಿದ್ದರೆ ಅವನು ಆ ಮರಾಟ ಸ್ತ್ರೀಯ ಸಹವಾಸಕ್ಕೆ ಅಷ್ಟೊಂದು ಮೆಚ್ಚುತ್ತಿದ್ದನೋ ಇಲ್ಲವೋ ಯಾರಿಗೆ ಗೊತ್ತು ? ಆದರೆ ಗಾಯಪಟ್ಟ ಆತನ ಮನಸ್ಸಿಗೆ ಆ ಮಹಾರಾಷ್ಟ್ರಸ್ತ್ರೀಯ ಸಹವಾಸವೂ, ಅದರಿಂದುಂಟಾಗುವ ಪೂರ್ವಸ್ಮೃತಿಯೂ ಮುಲಾಮಿನಂತೆ ಹಿತಕರವಾದುವು. ತನಗೆ ಸ್ವಲ್ಪ ಅವಕಾಶವಿರುವುದೊಂದೇ ತಡ; ಆಕೆಯನ್ನು ತನ್ನ ಡೇರೆಗೆ ಕರೆಯಿಸಿಕೊಳ್ಳುತ್ತಿದ್ದನು. ಅವಳಾದರೂ ಒಳ್ಳೆಯ ಆನಂದದಿಂದ ಅಲ್ಲಿಗೆ ಬರುತ್ತಿದ್ದಳು.

ಈ ಸ್ಥಿತಿಯಿಂದ ಯಾವತರದ ಪರಿಣಾಮವುಂಟಾಗಬೇಕಾಗಿತ್ತೋ ಅದು ಅಲ್ಪಾವಧಿಯಲ್ಲಿಯೇ ಸಂಘಟಿಸಿತು !

---

## ಹತ್ತನೆಯ ಪ್ರಕರಣ



### ರಹಸ್ಯ ಸ್ಫೋಟ !





ನಿಕರೆಲ್ಲರೂ ಬಜಾಜೀಖಾನನ ವಿಷಯವನ್ನೇ ಚರ್ಚಿಸುತ್ತಿದ್ದರು. ಎಲ್ಲರೂ ಅತನ ಮೇಲೆ ಕಣ್ಣಿಟ್ಟಿದ್ದರು. ಇಂತಹ ವಯಸ್ಸಿನಲ್ಲಿ ಖಾನನು ಆ ಮರಾಟ ಹುಡುಗೆಗೆ ಹೇಗೆ ಮರುಳಾದನೆಂದು ಎಲ್ಲರಿಗೂ ಆಶ್ಚರ್ಯವಾಯಿತು. ಖಾನನ ವಿಷಯವಾಗಿ ಯಾರಿಗೆ ಏನು ತಿಳಿಯಿತೋ ಅದನ್ನು ಅವರು ನುಡಿಯುತ್ತಿದ್ದರು. ಖಾನನ ಎದುರಿನಲ್ಲಿ ಒಂದು ಅಕ್ಷರವನ್ನು ಕೂಡ ಮಾತನಾಡಲು ಯಾರಿಗೂ ಧೈರ್ಯವಿರಲಿಲ್ಲ. ಆದುದರಿಂದ ಆತನ ಪರೋಕ್ಷದಲ್ಲಿಯೇ ಜನರು ಈ ಪ್ರಕಾರ ' ಕುಚು ಕುಚು ' ಮಾತಾಡುತ್ತಿದ್ದರು. ಬಜಾಜೀಖಾನನ ಲಕ್ಷ್ಯವು ಈ ಮಾತಿನ ಕಡೆಗೆ ಇದ್ದಿಲ್ಲ. ಕಳೆದ ಕೆಲವು ದಿವಸಗಳಲ್ಲಿ ಸಂಘಟಿಸಿದ ಸಂಗತಿಗಳಿಂದ ಆತನಿಗೆ ಸಂಸಾರದಲ್ಲಿ ಹೇಯವು ಉತ್ಪನ್ನವಾಗಿತ್ತು. ತನ್ನ ಸುತ್ತಲಿನ ಸ್ಥಿತಿಯಿಂದ ಆತನಿಗೆ ಬಹಳ ಬೇಸರವುಂಟಾಗಿತ್ತು. ಆದುದ

ರಿಂದ ಮನಸ್ಸಿನ ಸಮಾಧಾನಕ್ಕಾಗಿ ಆ ಮರಾಟ ಹುಡುಗೆಯನ್ನು ತನ್ನ ಡೇರೆಯಲ್ಲಿ ಕರೆಯಿಸಿಕೊಂಡು ಕಾಲವನ್ನು ಕಳೆಯುತ್ತಿದ್ದನು. ಅವಳು ಎದುರಿನಲ್ಲಿದ್ದರೆ ಆತನ ಮನಸ್ಸು ಸಾಂಪ್ರತಕಾಲದ ಮಲಿನವಾದ ಪರಿಸ್ಥಿತಿಯಿಂದ, ಹದಿನಾರು ವರುಷದ ಹಿಂದಿನ ಮನೋರಮವಾದ ಪರಿಸ್ಥಿತಿಯಲ್ಲಿ ಪ್ರವೇಶಮಾಡುತ್ತಿತ್ತು. ಅದರಿಂದ ಎಂದೂ ದೊರೆಯದಿರುವ ಸುಖವು ಅವನಿಗೆ ಆ ಸ್ವಪ್ನಮಯಸ್ಥಿತಿಯಲ್ಲಿಯೇ ಪ್ರಾಪ್ತವಾಗುತ್ತಿತ್ತು. ಆದುದರಿಂದ ಆತನು ಬಾಹ್ಯಜಗತ್ತನ್ನು ಮರೆತೇ ಬಿಡುತ್ತಿದ್ದನು. ಆ ಮರಾಟ ಹುಡುಗೆಯು ಎದುರಿನಲ್ಲಿದ್ದರೆ ಜಗತ್ತೆಲ್ಲವೂ ಆತನಿಗೆ ತುಚ್ಛವಾಗುತ್ತಿತ್ತು. ಆದುದರಿಂದಲೇ ಅವಳನ್ನು ಆತನು ಮೇಲಿಂದಮೇಲೆ ಕರೆಯಿಸುತ್ತಿದ್ದನು. ಅವಳಾದರೂ ಕರೆಯಿಸಿದೊಡನೆಯೇ ಆತನ ಡೇರೆಯಲ್ಲಿ ಬಂದು ನಿಲ್ಲುತ್ತಿದ್ದಳು. ಅವಳ ಗಂಡನಾದರೂ ಇದಕ್ಕೆ ಪ್ರತಿಬಂಧವನ್ನು ಎಂದೂ ಮಾಡುತ್ತಿರಲಿಲ್ಲ; ಖಾನನ ಡೇರೆಯಲ್ಲಿ ಹೋಗುವದಕ್ಕೆ ಆ ಮರಾಟನು ತನ್ನ ಹೆಂಡತಿಗೆ ಉತ್ತೇಜನವನ್ನೇ ಕೊಡುತ್ತಿದ್ದನು. ಖಾನನ ಹತ್ತರ ಅಡಿಗಡಿಗೆ ತನ್ನ ಹೆಂಡತಿಯು ಹೋಗಬೇಕೆಂದು ಆತನು ಮನಃಪೂರ್ವಕವಾಗಿ ಇಚ್ಛಿಸುತ್ತಿದ್ದನು. ಅಂದಮೇಲೆ ಖಾನನ ಹತ್ತರ ಯಾವದಾದರೊಂದು ಕೆಲಸವನ್ನು ಸಾಧಿಸಿಕೊಳ್ಳಬೇಕೆಂದು ಅವರ ಉದ್ದೇಶವಿತ್ತೋ ಏನೋ ಯಾರಿಗೆ ಗೊತ್ತು ?

ಈ ವರ್ತಮಾನವು ಅಫ್‍ಝುಲ್‍ಖಾನನಿಗೆ ತಿಳಿಯದೆ ಉಳಿಯಲಿಲ್ಲ. ಶಿಬಿರದಲ್ಲಿ ಗಂಡಹೆಂಡಿರಾದ ಮರಾಟರಿಬ್ಬರು ಬಂದಿದ್ದು, ಆ ಸ್ತ್ರೀಯ ಮೋಹಕವಾದ ಮುಖಮುದ್ರೆಗೆ ಬಜಾಜೀಖಾನನು ಮೋಹಿತನಾಗಿದ್ದಾನೆಂಬ ಸಂಗತಿಯು ಅವನಿಗೆ ತಿಳಿಯಿತು. ಅಫ್‍ಝುಲ್‍ಖಾನನು ಈ ವಿಷಯವನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡು ಆಮೇಲೆ ಆತನು ವಾಡಿಕೆಯ ರೂಢಿಯಂತೆ ರೋಷನ ಬೇಗಮಳ ಕಿವಿಯಲ್ಲಿ ಊದಿದನು. ಹೆಂಗಸು ಎಷ್ಟೇ ಸಭ್ಯಳೂ ಸಾತ್ವಿಕಳೂ ಆಗಿದ್ದರೂ ಅವಳು ಸವತಿಯ ನೆರಳನ್ನು ಕೂಡ ಸಹಿಸುವುದಿಲ್ಲ; ರೋಷನ ಬೇಗಮಳಾದರೋ ನಾಗರ ಹಾವಿನಂತಹಳು; ಆಕೆಯು ಶ್ರೀಮಂತನೂ ಸತ್ತಾಧೀಶನೂ ಆದ ಬಾದಶಹನ ಮಗಳು; ಬಾದಶಹನ ಕೃಪೆಯಿಂದಲೇ ಬಜಾಜೀಖಾನನು ವೈಭವಶಿಖರವನ್ನೇರಿದ್ದನು. ಆಕೆಯು ಪ್ರಕಾಶಮಾನವಾದ ಜ್ಯೋತಿಯಾಗಿದ್ದು, ಬಜಾಜಿಯು ಆಕೆಯ ದೃಷ್ಟಿಯಿಂದ ಪರಪ್ರಕಾಶವಾದ ಗೋಲವಾಗಿದ್ದನು. ಅಂದಮೇಲೆ ಬಜಾಜೀಖಾನನ ವರ್ತಮಾನವು ಅವಳಿಗೆ ಹೇಗೆ ಸಹನವಾಗಬೇಕು?

ಆಕೆಯು ಅಕಾಂಡತಾಂಡವವನ್ನಾರಂಭಿಸಿದಳು. ಆಕೆಯ ಬಾಯೊಳಗಿನ ಭಯಂಕರವಾದ ವಿಷಮಯಫೂತ್ಕಾರದಿಂದ ತಮ್ಮ ಒಡೆಯನು ಸುಟ್ಟು ಬೂದಿಯಾಗುವನೋ ಏನೋ ಎಂದು ಬಜಾಜಿಯ ಸೇವಕರೆಲ್ಲರೂ ಹೆದರಿದರು! "ನೀವು ಈ ಪ್ರಕಾರ ನಿರ್ಲಜ್ಜತ್ವದಿಂದ ನಡೆಯಲಾರಂಭಿಸಿದರೆ, ನನಗಾದರೂ ಹತ್ತು ದಿಕ್ಕುಗಳೂ ತೆರವಾಗಿಯೇ ಇರುವವು!" ಎಂದು ವಿಷಮಯಭಾಷೆಯಿಂದ ಬೇಗಮಳು ತನ್ನ ಪತಿದೇವರಿಗೆ ಖಂಡಿತವಾಗಿ ಹೇಳಿಬಿಟ್ಟಳು. ಆದುದರಿಂದ ನಾಲ್ಕಾರು ದಿವಸಗಳ ಮಟ್ಟಿಗಾದರೂ ಖಾನನು ಆ ಮರಾಟ ಹುಡುಗಿಯ ವ್ಯಸನವನ್ನು ಬಿಟ್ಟು ಇರಬಹುದೆಂದು ಎಲ್ಲರೂ ತಿಳಿದಿದ್ದರು; ಯಾಕಂದರೆ ರೋಷನಳಂತಹ ಹಾವು ಹೆಡೆಯನ್ನು ತಿರುಗಿಸಿದರೆ ಎಷ್ಟು ಭಯಂಕರವಾಗಿ ಕಚ್ಚಬಹುದೆಂಬ ನಿಯಮವೇ ಇದ್ದಿಲ್ಲ. ಮೇಲಾಗಿ ಆಕೆಯು ಹೇಳಿದಂತೆ ಕೇಳುವುದರ ಮೇಲೆಯೇ ಬಜಾಜೀ ಖಾನನ ದೊಡ್ಡತನವು ಅವಲಂಬಿಸಿತ್ತು. ಅಂದ ಮೇಲೆ ಜನರು ಹಾಗೆ ಊಹಿಸಿದುದರಲ್ಲಿ ಆಶ್ಚರ್ಯವೇನು?

ಆದರೆ ಇದರಿಂದ ಅಕಲ್ಪಿತವಾದ ಸಂಗತಿಯೇ ಸಂಭವಿಸಿತು. ಬೇಗಮಳ ಫೂತ್ಕಾರದಿಂದ ಖಾನನ ಹೃದಯವು ಕಂಪಿತವಾಗಲಿಲ್ಲ. ಅವನು ಮೊದಲಿಗಿಂತ ಹೆಚ್ಚಾಗಿಯೇ ಉದಾಸೀನನಾದನು. ಆ ಉದಾಸೀನತೆಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಅವನು ನಿತ್ಯಕ್ರಮದಂತೆ ಮತ್ತೆ ಆ ಮರಾಟ ಹುಡುಗಿಯನ್ನು ಕರೆಯಿಸಿದನು. ಖಾನನ ನಿರೋಪವನ್ನು ಕೇಳಿದೊಡನೆಯೇ ಆ ಸೇವಕನು ಚಕಿತನಾದನು. ರೋಷನ ಬೇಗಮಳ ಕ್ರೋಧಾಗ್ನಿಯಲ್ಲಿ ಎಣ್ಣೆಯನ್ನು ಸುರಿಯುವುದಕ್ಕೆ ಬಜಾಜೀ ಖಾನನು ಸಿದ್ಧನಾದುದನ್ನು ನೋಡಿ ಅವನ ಮನಸ್ಸು ಯೋಗ್ಯಸ್ಥಿತಿಯಲ್ಲಿರುವದೋ ಇಲ್ಲವೋ ಎಂಬ ಭೀತಿಯು ಅವನಿಗೆ ಉತ್ಪನ್ನವಾಯಿತು! ಯಾಕಂದರೆ ಈ ಪ್ರಕಾರದ ಎಣ್ಣೆಯನ್ನು ಸುರಿಯುವುದರಿಂದ ಪ್ರಜ್ವಲಿಸುವ ಜ್ವಾಲೆಯಿಂದ ಬಜಾಜೀಖಾನನ ಶಿಬಿರವಷ್ಟೇ ಅಲ್ಲದೆ, ಮುಸಲ್ಮಾನರ ಸೈನ್ಯವೆಲ್ಲ ಸುಟ್ಟು ಬೂದಿಯಾಗಬಹುದೆಂದು ಎಲ್ಲರಿಗೂ ಮನವರಿಕೆಯಾಗಿತ್ತು! ಆದುದರಿಂದ ತನ್ನ ಕಿವಿಗಳು ತನ್ನನ್ನು ಮೋಸಗೊಳಿಸಿರಬಹುದೆಂದೆಣಿಸಿ ಆ ಸೇವಕನು ಮಂಕನಂತೆ ಹಾಗೆಯೇ ನಿಂತುಕೊಂಡನು. "ಕತ್ತೇ, ನಾನು ಹೇಳಿದುದು ಕೇಳಿಸಲಿಲ್ಲವೇ? ಹೋಗು ಆ ಮಥೂಬಾಯಿಯನ್ನು ಕರೆದುಕೊಂಡು ಬಾ. ಕತ್ತೆಯಂತೆ ಹೀಗೇಕೆ ನಿಂತುಕೊಂಡೆ?" ಎಂದು ಖಾನನು ಅವನನ್ನು ಬೆದರಿಸಿದನು. ಇದನ್ನು ಕೇಳಿ ಆ ಸೇವಕನು ಅತ್ಯಂತಚಕಿತನಾ

ದನು! ಆದರೂ ತಾನು ಸ್ವಪ್ನದಲ್ಲಿರುವೆನೋ ಏನೋ ಎಂಬ ಶಂಕೆಯಿಂದ ಆತನು ತನ್ನ ಬೆರಳನ್ನು ಕಚ್ಚಿ ನೋಡಿದನು. ಆವರೆ ಖಾನನ ಕೋಪಾವಿಷ್ಟವಾದ ಮುಖಮುದ್ರೆಯನ್ನು ನೋಡಿ, ಅಂತರಂಗವು ತನಗೆ ತಿಳಿಯದೆ ಇದ್ದರೂ ಇದು ನಿಜವಾದ ಸಂಗತಿಯೇ ಎಂದು ತಿಳಿದುಕೊಂಡು ಅವಳನ್ನು ಕರೆದು ತರುವದಕ್ಕಾಗಿ ಹೊರಟುಹೋದನು.

'ನೀನು ಯಾರು?' ಎಂದು ಆ ಹುಡುಗೆಯನ್ನು ಸ್ಪಷ್ಟವಾಗಿ ಕೇಳಿಬಿಡಬೇಕೆಂದು ಖಾನನು ಮನಸ್ಸಿನಲ್ಲಿ ನಿಶ್ಚಯಿಸಿದನು. ಈ ಹುಡುಗೆಯು ಏನೇ ಹೇಳಲಿ; ಇವಳು ನಿಜವಾಗಿಯೂ ನನ್ನ ಹೆಂಡತಿಯ ಮಗಳೇ ಆಗಿರಬಹುದು; ಎಂಬ ವಿಶ್ವಾಸವು ಆತನಲ್ಲಿ ಉತ್ಪನ್ನವಾಯಿತು. ಈ ಮಾತನ್ನು ಸ್ಪಷ್ಟವಾಗಿ ತಿಳಿದುಕೊಂಡ ಹೊರತು ಇಂದು ಆ ಹುಡುಗೆಯನ್ನು ಇಲ್ಲಿಂದ ಬಿಡುವಹಾಗಿಲ್ಲವೆಂದು ಖಾನನು ನಿಶ್ಚಯಿಸಿದನು. ಅದರಂತೆ ಅವನು ತನ್ನಲ್ಲಿಯೇ ಮಾತನಾಡಿಕೊಳ್ಳುತ್ತಿದ್ದನು.

"ಆ ಹುಡುಗೆಯು ಬಂದಕೂಡಲೇ ಆಕೆಯನ್ನು ಸ್ಪಷ್ಟವಾಗಿಯೇ ಕೇಳಿಬಿಡುತ್ತೇನೆ."

ಇಷ್ಟರಲ್ಲಿಯೇ "ಸ್ಪಷ್ಟವಾಗಿ ಏನನ್ನು ಕೇಳುತ್ತೀರಿ!" ಎಂಬ ಮಂಜುಳವಾದ ಶಬ್ದಗಳು ಖಾನನ ಕಿವಿಯಲ್ಲಿ ಬಿದ್ದವು.

ಅವಳನ್ನು ನೋಡಿದ ಕೂಡಲೇ ಖಾನನು ಎದ್ದು ನಿಂತನು; ಮತ್ತು ಅವಳ ಕಯ್ಯನ್ನು ಹಿಡಿದು ಆಸನದ ಮೇಲೆ ಕುಳ್ಳಿರಿಸಬೇಕೆಂದು ಪ್ರಯತ್ನ ಮಾಡುತ್ತಿದ್ದನು. ಇಷ್ಟು ಅಧಿಕಪ್ರಸಂಗವನ್ನು ಖಾನನು ಮಾಡಿದುದು ಇದೇ ಮೊದಲನೆಯ ಸಾರೆ. ಆ ಹುಡುಗೆಯು ತನ್ನ ಕೈಯನ್ನು ಒಮ್ಮೆಲೇ ಖಾನನ ಕೈಯೊಳಗಿಂದ ಸೆಳೆದುಕೊಂಡು ತ್ವೇಷದಿಂದ ಮಾತನಾಡಿದಳು:—"ಕುಲಹೀನರ ಹಸ್ತಸ್ಪರ್ಶಕ್ಕಿಂತ ಸತ್ತು ಹೋಗುವದು ಉತ್ತಮವು!"

ಕೋಮಲೆಯಾದ ಈ ರಮಣಿಯಲ್ಲಿ ಇಷ್ಟೊಂದು ತೇಜಸ್ಸು ಎಲ್ಲಿಂದ ಬಂತೆಂದು ಖಾನನು ಚಕಿತನಾಗಿ ಅವಳನ್ನು ನೋಡಲಾರಂಭಿಸಿದನು. ಆ ಹುಡುಗೆಯ ಸರ್ವಾಂಗವೂ ಸಂತಾಪದಿಂದ ಕಂಪಿಸುತ್ತಿತ್ತು. ಆದುದರಿಂದ ಮೋಹಕವಾದ ಆಕೆಯ ಮೊಗವು ಈ ಪ್ರಸಂಗದಲ್ಲಿ ಪ್ರೇಕ್ಷಣೀಯವಾಗಿತ್ತು.

ಖಾನನು ಬಹಳ ಸೌಮ್ಯಭಾವದಿಂದ ಮಾತನಾಡಿದನು:—"ನಾನು ನಿನ್ನ ಕಯ್ಯನ್ನು ಹಿಡಿದುದರಿಂದ ವಿಪರೀತಕಲ್ಪನೆಯು ನಿನ್ನ ಮನಸ್ಸಿನಲ್ಲಿ ಬಂದು

ನಿನಗೆ ಬಹಳೇ ಸಂತಾಪವಾದಂತೆ ತೋರುತ್ತದೆ. ನಿನ್ನಲ್ಲಿ ಆ ತರದ ಕಲ್ಪನೆಯು ಒಂದುವೇಳೆ ಹುಟ್ಟಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ; ಯಾಕೆಂದರೆ ನಾನು ಅಂತಹ ಚಮತ್ಕಾರಿಕ ರೀತಿಯಿಂದಲೇ ನಿನ್ನೊಡನೆ ವರ್ತಿಸಿದ್ದೇನೆ. ಆದರೆ ನೀನು ನನ್ನ ಮೇಲೆ ವಿಶ್ವಾಸವಿಡುತ್ತಿದ್ದರೆ ಕೇಳು; ನಾನು ಪ್ರಮಾಣಪೂರ್ವಕವಾಗಿ ಹೇಳುವುದೇನಂದರೆ—ನಾನು ನಿನ್ನನ್ನು ಕೆಟ್ಟ ದೃಷ್ಟಿಯಿಂದ ಎಂದೂ ನೋಡಿಲ್ಲ. ನನ್ನ ಪ್ರೇಮವು ನಿನ್ನ ಮೇಲೆ ಕುಳಿತಿರುವುದೇನೋ ನಿಜ. ಆದರೆ ಅದು ವಿಷಯ ವಾಸನೆಯ ಪ್ರೇಮವಲ್ಲ. ಅದು ಪಿತಾಪುತ್ರಿಯರಲ್ಲಿರುವ ಶುದ್ಧಪ್ರೇಮವಾಗಿದೆ. ನನ್ನ ಮನಸ್ಸಿನಲ್ಲಿ ನಿನ್ನ ವಿಷಯವಾಗಿ ಅಪತ್ಯಸ್ನೇಹವು ಜಾಗೃತವಾಗಿದೆ; ಮತ್ತು ನಿನ್ನನ್ನು ನೋಡಿ ನಾನು ಮರುಳು ಹಿಡಿದವನಂತೆ ಮಾಡುವುದಕ್ಕೊ ಒಂದು ಕಾರಣವಿದೆ. ಒಂದಾನೊಂದು ಕಾಲದಲ್ಲಿ ನನ್ನ ಪ್ರೀತಿಯ ವ್ಯಕ್ತಿಯೊಂದಿತ್ತು. ಆ ನನ್ನ ಪ್ರಿಯತಮೆಯ ರೂಪವೂ ನಿನ್ನ ರೂಪವೂ ಒಂದೇ ಆಗಿದೆ. ನಿನ್ನನ್ನು ನೋಡಿದೊಡನೆಯೇ ನನಗೆ ಆಕೆಯ ನೆನಪಾಯಿತು. ಹದಿನಾರು ವರುಷಗಳ ಅನಂತರ ನನ್ನ ಹೆಂಡತಿಯೇ ನನ್ನ ಎದುರಿನಲ್ಲಿ ಬಂದು ನಿಂತು ಕೊಂಡಿರುವಳೆಂದು ನನಗೆ ಒಂದು ಕ್ಷಣಹೊತ್ತು ಅನಿಸಿತು. ಆದರೆ ನನ್ನ ಗಡ್ಡದೊಳಗಿನ ಬಿಳಿಯ ಕೂದಲುಗಳನ್ನು ಕಂಡು ನೀನು ಅವಳಲ್ಲವೆಂದು ನಿಶ್ಚಯಿಸಿದೆನು; ನನ್ನ ಪ್ರಾಣಾಧಿಕೆಯು ನಿನ್ನಂತೆಯೇ ಇದ್ದಳಾದರೂ ಆಗ ನಾನು ತರುಣನಿದ್ದೆನು. ಅಂದಮೇಲೆ ನೀನು ಯಾರು? ನೀನು ಬಜಾಜೀ ನಿಂಬಾಳಕರನ ಹೆಂಡತಿಯು — ನನ್ನ ಪ್ರಿಯ......"

"ಖಾನಸಾಹೇಬರೇ, ತಮ್ಮ ಮುಖದಿಂದ ಆ ಸಾಧ್ವಿಯ ಹೆಸರನ್ನು ಉಚ್ಚರಿಸಬೇಡಿರಿ. ಆ ಪವಿತ್ರಪ್ರೇಮದ ಪುತ್ಥಳಿಗೆ ನನ್ನವಳೆಂದು ನೀವು ಅಂದರೆ, ನಿಮ್ಮ ಬಾಯಲ್ಲಿ ಹುಳಗಳು ಬಿದ್ದಾವು!" ಆ ಹುಡುಗಿಯು ಖಾನನನ್ನು ಕುರಿತು ತೀಕ್ಷ್ಣವಾಗಿ ಈ ರೀತಿ ಮಾತನಾಡಿದಳು.

"ಬಾಲೇ, ನಾನು ಯಾರೆಂಬುದು ನಿನಗೆ ಗೊತ್ತಿಲ್ಲ; ಆದುದರಿಂದ ಹೀಗೆ ಮಾತಾಡುತ್ತೀಯೆ!"

"ನೀವು ಯಾರೆಂಬುದು ನನಗೆ ಗೊತ್ತಿಲ್ಲವೇ? ಅಖಿಲಜಗತ್ತಿಗೇ ಗೊತ್ತಿದೆ! ನೀವು ರೊಟ್ಟಿಯ ಚೂರಿಗೆ ಬಾಲವನ್ನು ಅಲ್ಲಾಡಿಸಿಕೊಂಡು ಓಡಾಡುವ ನಾಯಿಯ! ನೀವು ನಿಮ್ಮ ಬಂಧುಬಾಂಧವರ ಕತ್ತನ್ನು ಕತ್ತರಿಸಲು ಸಿದ್ಧರಾದ ಮುಸಲ್ಮಾನರ

ಕಯ್ಯೊಳಗಿನ ಗುಲಾಮರು ! ಪತಿವ್ರತೆಯನ್ನು ತ್ಯಾಗಮಾಡಿ, ಮುಸಲ್ಮಾನ ತುಚ್ಛ ಸ್ತ್ರೀಯ ಅನುಗ್ರಹದಿಂದ ಸುಖವನ್ನು ಹೊಂದುವಂತಹ ನಾಚಿಕೆಗೇಡಿಗಳು ! ನೀವು, ನಿಮ್ಮ ಮನೆಯಲ್ಲಿ ಸಿಕ್ಕುತ್ತಿದ್ದ ಉಪ್ಪು ಅನ್ನವನ್ನು ತಿರಸ್ಕರಿಸಿ, ಮುಸಲ್ಮಾನರ ಎಂಜಲದ ಪಕ್ವಾನ್ನಶೇಷವನ್ನು ನೆಕ್ಕುವವರು ! ನೀವು......" ಈ ಪ್ರಕಾರ ಅವಳು ಇನ್ನೂ ಮಾತನಾಡುತ್ತಿರಲು ಬಜಾಜಿಯು ನಡುವೇ ಮಾತನಾಡಿದನು.

"ಬಾಲೇ, ಸಾಕು ಸಾಕು; ಇನ್ನೂ ಹೆಚ್ಚಾಗಿ ಮಾತನಾಡಿ, ಅರ್ಧವಗ್ಧವಾದ ನನ್ನ ಹೃದಯವನ್ನು ಪೂರ್ಣವಾಗಿ ಸುಟ್ಟುಬಿಡಬೇಡ. ನಾನು ಒಂದಾನೊಂದು ಕಾಲವಲ್ಲಿ ಬಜಾಜೀನಿಂಬಾಳಕರನಾಗಿದ್ದೆನು; ಆದುದರಿಂದಲೇ ನನ್ನ ಪ್ರಿಯತಮೆಯ ವಿಷಯವಾಗಿ— "

"ಆದರೆ ಬಜಾಜೀನಿಂಬಾಳಕರರೆಂದು ಹೇಳಿಕೊಳ್ಳಲು ನಿಮಗೆ ಈಗ ಯಾವ ಆಧಾರವುಂಟು ? ನೀವು ನಿಮ್ಮ ಮನೆತನವನ್ನೇ ಮರೆತುಬಿಟ್ಟಿರಿ; ಮುಸಲ್ಮಾನರಾದಿರಿ. ಮರಾಟರು ನಿಮಗೆ ಪರಕೀಯರಂತೆ ತೋರಹತ್ತಿದರು; ಇಷ್ಟೇ ಅಲ್ಲ, ಅವರ ಕೊರಳನ್ನು ಕೊಯ್ಯಲು ಸಿದ್ಧರಾಗಿ ನಿಂತಿರುವಿರಿ; ಮುಸಲ್ಮಾನರು ನಿಮಗೆ ಬಾಂಧವರಾದರು. ಆ ಪತಿವ್ರತೆಯನ್ನು ನೂಕಿಬಿಟ್ಟು ಒಬ್ಬ ಸರ್ಪಿಣಿಯನ್ನು ಅಪ್ಪಿಕೊಂಡಿರಿ. ಆಕೆಯೂ ಆಕೆಯ ಮಗನೂ ನಾಳೆ ನಿಮ್ಮ ಎದುರಿಗೆ ಬಂದು ನಿಂತರೆ, ಮುಸಲ್ಮಾನರ ಕೃತಜ್ಞಸೇವಕರಾದ ನೀವು ಅವರ ತಲೆಯನ್ನು ತುಂಡುಮಾಡಲು ಹಿಂದು ಮುಂದು ನೋಡುವವರಲ್ಲ. ಇಷ್ಟೇ ಅಲ್ಲ. ಆಕೆಯನ್ನು ಪಾರಿತೋಷಕವಾಗಿ ಅದಿಲಶಹನ ಅಂತಃಪುರಕ್ಕೆ ಕಳುಹಿಸುವುದು ನಿಮಗೆ ಅಭಿಮಾನಾಸ್ಪದವೇ ಎನಿಸಬಹುದು! ಯಾಕೆಂದರೆ ಮರಾಟರನ್ನು ನಾಶಮಾಡುವುದೇ ನಿಮ್ಮ ಪ್ರತಿಜ್ಞೆಯಲ್ಲವೇ? "

"ಮಗಳೇ, ನನ್ನ ಹೃದಯವು ಅಷ್ಟೊಂದು ನೀಚವಾಗಿದೆಯೆಂದು ನೀನು ತಿಳಿಯುತ್ತೀಯಾ! ಬಜಾಜೀ ನಿಂಬಾಳಕರನ ಹೆಂಡತಿಯ ಮತ್ತು ಮಗನ ಸಮಾಚಾರವು ನಿನಗೆ ಗೊತ್ತಿದೆಯೇ ? ನಾನು ನೀನೆನ್ನುವಷ್ಟು ಕೆಟ್ಟವನಾಗಿಲ್ಲ ! ಇಷ್ಟೊಂದು ನೀಚತನವನ್ನು ನಾನು ಮಾಡಬಹುದೆಂದು ನೀನು ತಿಳಿಯುತ್ತೀಯಾ!"

" ನಿಶ್ಚಯವಾಗಿ ಮಾಡುವಿರಿ. ಯಾವನು ರೊಟ್ಟಿಯ ತುಣುಕಿಗಾಗಿ ತನ್ನ ದೇಹವನ್ನೇ ಭ್ರಷ್ಟಗೊಳಿಸಿದನೋ, ಯಾವನು ಎಂಜಲಗುಳಿಗೋಸ್ಕರ ಭಗವಾನ್ ಶ್ರೀಕೃಷ್ಣಪರಮಾತ್ಮನ ಧರ್ಮವನ್ನು ತಿರಸ್ಕರಿಸಿದನೋ, ಹಿಂದೂಧರ್ಮವನ್ನು

ರಕ್ಷಿಸುವುದಕ್ಕಾಗಿಯೂ ಗೋಬ್ರಾಹ್ಮಣರನ್ನು ಪಾಲಿಸುವುದಕ್ಕಾಗಿಯೂ ಹಿಂದುಸ್ಥಾನದಲ್ಲಿ ಸ್ವರಾಜ್ಯವನ್ನು ಸ್ಥಾಪಿಸುವುದಕ್ಕಾಗಿಯೂ ನಡುಕಟ್ಟಿ ನಿಂತವರ ಮೇಲೆ ಯಾವನು ದಾಸ್ಯದ ಸರದಾರತನವನ್ನು ದೊರಕಿಸುವ ಇಚ್ಛೆಯಿಂದ ಖಡ್ಗವನ್ನೆತ್ತಿಕೊಂಡು ಸಿದ್ಧನಾಗಿದ್ದಾನೆಯೋ, ಅಂತಹನ ನೀಚತನಕ್ಕೆ ಇನ್ನೂ ಸೀಮೆಯುಂಟೇ? ಆ ಪತಿವ್ರತೆಯು ಎಂದೋ ಸ್ವರ್ಗಕ್ಕೆ ತೆರಳಿದಳು. ಆದರೆ ಈ ಅಶುಭವನ್ನು ನೋಡುವ ಪ್ರಸಂಗವು ಆಕೆಯ ಮಗನಮೇಲೆ ಬಂದಿದೆ. ಆತನು ನಿಮ್ಮ ದೃಷ್ಟಿಗೆ ಬಿದ್ದರೆ ಅವನನ್ನು ನಿಮ್ಮಂತೆಯೇ ಮುಸಲ್ಮಾನನನ್ನಾಗಿ ಮಾಡುವಿರಿ; ಇಲ್ಲವೆ ಆತನ ತಲೆಯನ್ನು ಹಾರಿಸಿ ಭಾಲೆಗೆ ಚುಚ್ಚಿ ವಿಜಾಪುರದ ಅದಿಲಶಹನಿಗೆ ಕಾಣಿಕೆಯಾಗಿ ಅರ್ಪಿಸುವಿರಿ. ಯಾಕಂದರೆ ಅವನು ಶಿವಾಜಿಯ ಪಕ್ಷದವನು; ನೀವಾದರೋ, ಮಹಾರಾಷ್ಟ್ರದಲ್ಲಿ ಮರಾಟರ ಸಿಂಹಾಸನವನ್ನು ಸ್ಥಾಪಿಸಗೊಡಲಿಕ್ಕಿಲ್ಲವೆಂದೂ, ಶಿವಾಜಿ ಭೋಸಲೆಯನ್ನು ಹಿಡಿದು ಇಲ್ಲವೆ ಕೊಂದು ಆತನ ಹಿಂದೆ ಅಡಗಿರುವಂತಹ ಆಕಳುಗಳನ್ನು ಕೊಲ್ಲದೆ ಬಿಡಲಿಕ್ಕಿಲ್ಲವೆಂದೂ, ಬ್ರಾಹ್ಮಣರನ್ನು ಕುಲಗೆಡಿಸಿ ಮಹಾರಾಷ್ಟ್ರವೆಲ್ಲವನ್ನೂ ಮುಸಲ್ಮಾನರಿಗೆ ಅಂಕಿತವನ್ನಾಗಿ ಮಾಡುವೆನೆಂದೂ ಪ್ರತಿಜ್ಞೆಮಾಡಿರುವ ವೀರರು! ಅಂದಮೇಲೆ ನಿಮ್ಮ ನೀಚತನವು ಎಲ್ಲಿಯ ವರೆಗೆ ಹೋದೀತು? ಏನು ಮಾಡೀತು? ಎಂಬದನ್ನು ಯಾರು ಹೇಗೆ ತಿಳಿಯಬಲ್ಲರು!"

"ನನ್ನ ಮಗನು ಸುಖರೂಪವಾಗಿದ್ದು ಶಿವಾಜಿಭೋಸಲೆಯ ಪಕ್ಷದಲ್ಲಿ ಸೇರಿರುವುದು ನಿಜವೇ? ಆ ದೇವಿಯು ಮೃತಳಾದಳೇ? ಇವನೊಬ್ಬನೇ ಉಳಿದನೇ?" ಇಷ್ಟು ಮಾತನಾಡಿ ಬಜಾಜಿಯು ನಿಟ್ಟುಸಿರು ಬಿಟ್ಟನು. ಆಗ ತರುಣಿಯು ಮಾತನಾಡಿದಳು— "ಯಾಕೆ? ಆತನು ಶಿವಾಜಿಯನ್ನು ಕೂಡಿಕೊಂಡಿರುವುದರಿಂದ ಆತನನ್ನು ಮುಸಲ್ಮಾನನನ್ನಾಗೆ ಮಾಡಲಿಕ್ಕೆ ಆಗುವುದಿಲ್ಲವೆಂದು ನಿಮಗೆ ಕೆಡಕೆನಿಸುತ್ತದಯೇನು? ಖಾನಸಾಹೇಬರೇ, ಈ ವ್ಯಸನವನ್ನು ಬಿಟ್ಟುಬಿಡಿರಿ. ಶಿವಾಜಿಯು ಆಶ್ರಯವಿಲ್ಲದಿದ್ದರೂ ಆತನು ತನ್ನ ಧರ್ಮವನ್ನು ಬಿಡುತ್ತಿದ್ದಿಲ್ಲ. "**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ**" ಎಂಬ ಭಗವಂತನ ವಾಕ್ಯವು ಆತನ ಮನಸ್ಸಿನ ಮೇಲೆ ಚೆನ್ನಾಗಿ ಬಿಂಬಿಸಿದೆ. ಆತನು ಯುದ್ಧದಲ್ಲಿ ತಮ್ಮನ್ನು ಸೋಲಿಸಿಯಾದರೂ ಸೋಲಿಸುವನು. ಇಲ್ಲವಾದರೆ, ರಣಕ್ಷೇತ್ರದಲ್ಲಿ ದೇಹವನ್ನಾದರೂ ಅರ್ಪಿಸುವನು. ಅಲ್ಲದೆ ಮುಸಲ್ಮಾನರ ದಾಸ್ಯವನ್ನು ಎಂದೂ

ಸ್ವೀಕರಿಸುವುದಿಲ್ಲ. ಕೆಲಕೆಲವು ವೇಳೆ ಭಂಗಿಯಿಂದ ತುಳಸಿಯು ಉತ್ಪನ್ನವಾಗು ತ್ತದೆಂದು ಹೇಳುತ್ತಾರಷ್ಟೇ ? ಅಷ್ಟು ದೂರ ಏಕೆ ? ಆತನು ನಿಮ್ಮ ಮಗನೇ ಅಲ್ಲ. ಇಂತಹ ಧರ್ಮಭ್ರಷ್ಟನಿಗೆ ಆತನು 'ಅಪ್ಪಾ' ಎಂದು ಎಂದೂ ಕರೆಯ ಲಾರನು. ಅವನು ಆ ಸಾಧ್ವಿಯ ಮಗನು ! "

ಬಜಾಜೀಖಾನನು ಬಹಳ ಆರ್ಜವದಿಂದ ಮಾತನಾಡಿದನು— "ನನಗೆ ಎಷ್ಟು ಅನ್ನಬೇಕೆಂದು ಎನಿಸುತ್ತದೆಯೋ ಅಷ್ಟೆಲ್ಲವನ್ನೂ ಅಂದುಬಿಡು. ನಾನು ನಿಜವಾ ಗಿಯೂ ಪಾಪಿಷ್ಠನು. ಆದರೆ ನೀನು ಯಾರೆಂಬುದು ನನಗೆ ಇನ್ನೂ ತಿಳಿಯಲಿಲ್ಲ ! ಆದುದರಿಂದ ದಯವಿಟ್ಟು ನೀನು ಯಾರೆಂಬುವನ್ನು ನನಗೆ ಹೇಳು. ನಿನ್ನ ರೂಪ ವನ್ನು ನೋಡಿ ನೀನು ಯಾರೆಂಬುವನ್ನು ತಿಳಿದುಕೊಳ್ಳುವ ಕುತೂಹಲವು ನನ್ನಲ್ಲಿ ಬಹಳ ಉತ್ಪನ್ನವಾಗಿದೆ ಆದುದರಿಂದ ಹೇಳು. ನೀನು ಯಾರು? "

" ನಾನು ಯಾರೆಂಬುದನ್ನು ಹೇಳಲೇ? " ಎಂದು ಅವಳು ತಲೆಯ ಮೇಲಿನ ಕೂದಲುಗಳನ್ನು ತೆಗೆದಿಟ್ಟಳು; ಸೀರೆಯನ್ನು ಕಳೆದು ಒಗೆದಳು; ಕುಪ್ಪುಸವನ್ನು ತೆಗೆದುಹಾಕಿದಳು; ಆಮೇಲೆ ಬಜಾಜಿಯು ಮುಂದೆ ಬಂದು ಮಾತನಾಡಿದಳು. "ನಾನು ಯಾರು ? ನಾನು ಮಹಾದಾಜಿ ನಿಂಬಾಳಕರನು ! ನಾನು ಯಾರು? ನಾನು ಶಿವಾಜಿ ಭೋಸಲೆಯ ಸೇವಕನು ! ನಾನು ಯಾರು ? ನಾನು ಜಾತಿಯು ಮರಾಟನು ! "

ಬಜಾಜೀಖಾನನು ಆಶ್ಚರ್ಯದಿಂದ ಸ್ತಿಮಿತನಾದನು. ಆ ಆಶ್ಚರ್ಯತರಂ ಗವು ಸ್ವಲ್ಪಮಟ್ಟಿಗೆ ಶಾಂತವಾದ ಮೇಲೆ ಮಾತನಾಡಿದನು— "ನನ್ನ ಪ್ರೀತಿಯ ಮಗನೇ ಬಾ, ನನ್ನನ್ನು ಗಟ್ಟಿಯಾಗಿ ಅಪ್ಪಿಕೋ. ನಿನ್ನನ್ನು ನೋಡಿ ಎಷ್ಟೋ ವರುಷಗಳಾದುವು. ನಿನ್ನನ್ನು ಎತ್ತಿಕೊಳ್ಳದೆ ಎಷ್ಟೋ ದಿವಸಗಳಾಗಿ ಹೋದುವು. ಇಷ್ಟು ದಿವಸಗಳವರೆಗೆ ಅಪತ್ಯಪ್ರೇಮಕ್ಕಾಗಿ ನನ್ನ ಹೃದಯವು ತಳಮಳಿಸುತ್ತಿತ್ತು; ನನ್ನನ್ನು ಅಪ್ಪಿಕೊ ! ನಿನ್ನ ದರ್ಶನದಿಂದ ನನ್ನ ಹೃದಯದ ಮೇಲೆ ಅಮೃತಸಿಂಚನ ಮಾಡು. " ಹೀಗೆಂದು ಅಪ್ಪಿಕೊಳ್ಳುವುದಕ್ಕಾಗಿ ಖಾನನು ತನ್ನ ಎರಡೂ ಕಯ್ಗ ಳನ್ನು ಮುಂದೆ ಮಾಡಿದನು.

ಆದರೆ ಮಹಾದಾಜಿಯು ತಂದೆಯಿಂದ ಎರಡು ಮೊಳ ದೂರದಲ್ಲಿ ನಿಂತು ಮಾತನಾಡಿದನು— "ಖಾನಸಾಹೇಬರೇ, ನೀವು ಮುಸಲ್ಮಾನರು; ನಾನಾದರೋ ಮರಾಟನು! " ಬಜಾಜಿಯು ಉತ್ತರವಿತ್ತನು. "ಮಗೂ, ಮುಸಲ್ಮಾನರ ಬಲಾ

ತ್ಕಾರದಿಂದ ನಾನು ನೋಡುವುದಕ್ಕೇನೋ ಮುಸಲ್ಮಾನನಾಗಿದ್ದಂತೆ ತೋರುತ್ತಿದ್ದರೂ, ಮನಸ್ಸಿನಿಂದ ಹಿಂದುವೇ ಆಗಿದ್ದೇನೆ. ನಾನು ನಿಜವಾದ ಮರಾಟನೇ ಆಗಿದ್ದೇನೆ. "

" ಆದರೆ ನೀವು ಮುಸಲ್ಮಾನರ ಕಯ್ಕೆಳಗಿನ ಆಳುಗಳು ! ಹಿಂದುಸ್ಥಾನದ ಸ್ವರಾಜ್ಯದ ವೈರಿಗಳು !! ನಾನಾದರೋ ಶಿವಾಜಿ ಮಹಾರಾಜನ ಏಕನಿಷ್ಠ ಸೇವಕನು !! "

" ಮಗನೇ, ನೀನು ಶಿವಾಜಿಮಹಾರಾಜನ ಪಕ್ಷವನ್ನು ವಹಿಸಿದ್ದರೆ ನಿನಗೋಸ್ಕರವಾಗಿ ನಾನಾದರೂ ಶಿವಾಜಿಮಹಾರಾಜನ ಪಕ್ಷವನ್ನು ಹಿಡಿಯಲೆಬೇಕು. ಯಾಕಂದರೆ ಈ ಪೃಥ್ವಿಯಲ್ಲಿ ನಿನ್ನ ಹೊರತು ನನಗೆ ಎರಡನೆಯವರು ಯಾರಿದ್ದಾರೆ? "

" ಅಪ್ಪಾ, ಈಗ ನಿಮ್ಮನ್ನು ಅಪ್ಪಾ ಎಂದು ಕರೆಯುವುದಕ್ಕೆ ಅಭಿಮಾನವೆನಿಸುತ್ತದೆ. ನಿಜವಾಗಿಯೂ ನೀವು ಶಿವಾಜಿಮಹಾರಾಜರೊಡನೆ ಸ್ನೇಹವನ್ನು ಮಾಡುವಿರಾ ? ಅದರಿಂದ ನಿಮಗೆ ಪಶ್ಚಾತ್ತಾಪವೆನಿಸಲಿಕ್ಕಿಲ್ಲ. ಯಾಕಂದರೆ ಅದರಲ್ಲಿ ನಮ್ಮ ಮಹಾರಾಜರ ಸ್ವಾರ್ಥವೇನೂ ಇಲ್ಲ " **ಹಿಂದೂಧರ್ಮವನ್ನು ಸಂರಕ್ಷಿಸಬೇಕು; ಹಿಂದೂಸ್ಥಾನದಲ್ಲಿ ಸ್ವರಾಜ್ಯವನ್ನು ಸ್ಥಾಪಿಸಬೇಕು.** " ಎಂಬ ಪವಿತ್ರವಾದ ಉದ್ದೇಶದಿಂದ ಅವರು ಈ ಕೆಲಸವನ್ನು ಕಯ್ಕೊಂಡಿದ್ದಾರೆ. ಅವರ ಪರಾಕ್ರಮವನ್ನೂ, ಶೀಲವನ್ನೂ ಸ್ನೇಹವನ್ನೂ ಮಾತೃಪಿತೃಭಕ್ತಿಯನ್ನೂ ನೋಡಿ ಈ ಕೆಲಸವಲ್ಲಿ ಅವರಿಗೆ ನಿಜವಾಗಿಯೂ ಯಶಸ್ಸು ಪ್ರಾಪ್ತವಾಗುವುದೆಂದು ಎಲ್ಲರಿಗೂ ಮನವರಿಕೆಯಾಗಿದೆ. ಅವರು ಶಿವನ ಅವತಾರವೆಂದು ಅವರ ಸೇವಕರೆಲ್ಲರೂ ತಿಳಿದಿದ್ದಾರೆ. "

ಆ ಪಿತಾಪುತ್ರರು ಒಂದುಗೂಡಿದರು. ಆ ಮನೋರಮಪ್ರಸಂಗವನ್ನು ಸರಿಯಾಗಿ ಬಣ್ಣಿಸುವುದು ಸಾಧ್ಯವಲ್ಲ. ಪರಸ್ಪರಮೇಲನದಿಂದ ಅವರಿಬ್ಬರಿಗೂ ಅತ್ಯಾನಂದವಾಯಿತು. ಅಪತ್ಯಸ್ನೇಹಕ್ಕೋಸ್ಕರ ತಳಮಳಿಸುತ್ತಿದ್ದ ಬಜಾಜೀಖಾನನ ಮನಸ್ಸು ಶಾಂತವಾಯಿತು. ತಂದೆಯ ಮುಖದರ್ಶನವಾದುದರಿಂದ ಇಂದಿನವರೆಗೆ ಪಿತೃರಹಿತನಾಗಿದ್ದ ಮಹಾದಾಜಿಗೆ ಸಮಾಧಾನವಾಯಿತು. ತನ್ನ ಮಗನ ತಲೆಯ ಮೇಲೆ ಪ್ರೀತಿಯಿಂದ ಕಯ್ಯಾಡಿಸುತ್ತ ಖಾನನು ಮಾತನಾಡಿದನು:

"ಮಗೂ, ಮಹಾದಾಜೀ, ನಿನ್ನ ಶಿವಾಜೀಮಹಾರಾಜರಿಗೂ ನನಗೂ ಭೆಟ್ಟಿಯಾಗಿ ಬಹಳ ದಿವಸಗಳಾದುವು. ಆದುದರಿಂದ ಇಲ್ಲಿಯ ವರೆಗೆ ನೀನು ಮಾಡಿದ ಅವರ ವರ್ಣನೆಯು ನಿಜವಾಗಿದೆಯೋ ಇಲ್ಲವೋ ಎಂಬುದನ್ನು ಹೇಳುವ ಸಾಮರ್ಥ್ಯವು ನನ್ನಲ್ಲಿಲ್ಲ. ಆದರೆ ಯಾವ ಕಾರಣದಿಂದ ನಿನಗೆ ಅವರ ಪಕ್ಷವು ಸತ್ಪಕ್ಷವೆಂದೆನಿಸು ತ್ತದೆಯೋ, ಅದೇ ಕಾರಣಕ್ಕೋಸುಗ ಅದು ಸತ್ಪಕ್ಷವಿರಲೇಬೇಕು. ನನ್ನ ಸೇನಾ ಪತಿಪದವು ಇಂದಿಗೆ ಮುಗಿಯಿತು. ನಾಳೆ ನಾನು ಈ ಕೆಲಸವನ್ನು ಇಲ್ಲಿಯೇ ಬಿಟ್ಟು ವಿಜಾಪುರಕ್ಕೆ ಹೋಗುತ್ತೇನೆ, ಮತ್ತು ಈ ಕೆಲಸವು ನನ್ನಿಂದಾಗದೆಂದು ಬಾದಶಹನಿಗೆ ಹೇಳಿಬಿಡುತ್ತೇನೆ. ಅಫ್‌ಝುಲ್‌ಖಾನನು ಈ ಕೆಲಸವನ್ನು ತನ್ನ ಮನಸ್ಸಿಗೆ ಬಂದಂತೆ ಮಾಡಿಕೊಳ್ಳಲಿ. ನಾನಂತೂ ನಾಳಿನ ದಿವಸವೇ ವಿಜಾಪು ರಕ್ಕೆ ಹೊರಡುತ್ತೇನೆ."

"ಛೇ, ನೀವು ವಿಜಾಪುರಕ್ಕೆ ಹೋಗುವ ಯೋಚನೆಯನ್ನು ಮಾಡಬೇಡಿರಿ. ಯಾರನ್ನು ಶಿವಾಜಿ ಮಹಾರಾಜರು ನಮ್ಮವರೆಂದು ಅನ್ನುವರೋ, ಅವರು ಮುಸ ಲ್ಮಾನರ ಆಶ್ರಯಕ್ಕೆ ಏಕೆ ಹೋಗಬೇಕು? ನಿಮ್ಮಂತಹ ಶೂರರಾದ ಮರಾಟಸರ ದಾರರೂ, ಸಂಬಂಧಿಕರೂ ಮಹಾರಾಜರಿಗೆ ಬೇಕಾಗಿದ್ದಾರೆ. ನಿಮ್ಮ ಸಾಹಾ ಯ್ಯವು ಅವರಿಗೆ ಬೇಕಾಗಿದೆ. ನಿಮ್ಮಂತಹರ ಉತ್ಸುಕತಾಬಲದಿಂದಲೇ ಅವರು ಸ್ವರಾಜ್ಯಮಂದಿರವನ್ನು ಕಟ್ಟಲಾರಂಭಿಸಿದ್ದಾರೆ. ನೀವು ಮುಸಲ್ಮಾನರಾಗಿದ್ದರೆ ವಿಜಾಪುರಕ್ಕೆ ಹೋಗುವುದು ಯೋಗ್ಯವೆನಿಸುತ್ತಿತ್ತು. ಆದರೆ ಇದೇ ಈಗ ನೀವು ಮುಸಲ್ಮಾನರ ಬಲಾತ್ಕಾರದಿಂದ ಮುಸಲ್ಮಾನರಾಗಿದ್ದೇವೆಂದೂ, ನಿಜವಾಗಿ ಹಿಂದು ಗಳೇ ಆಗಿದ್ದೇವೆಂದೂ ಹೇಳಿದಿರಲ್ಲವೇ? ಯಾವನು ಹಿಂದುವಾಗಿದ್ದಾನೆಯೋ, ಯಾವನು ಮರಾಟನಾಗಿದ್ದಾನೆಯೋ, ಯಾವನು ಮಹಾರಾಷ್ಟ್ರದ ಪುತ್ರನೋ ಅವನು ಪುಣೆಯ ಕಡೆಗೇ ಹೊರಡುವನು; ಅಲ್ಲಿಯೇ ಅವನಿಗೆ ನಿಶ್ಚಯವಾಗಿ ಆಶ್ರಯವು ಸಿಕ್ಕುವುದು! ಶಿವಾಜಿ ಮಹಾರಾಜರು ಮರಾಟರ ರಾಜರು; ಹಿಂದೂ ಗಳ ಗುರುಗಳು. ಆದುದರಿಂದ ನೀವು ಪುಣೆ ಪಟ್ಟಣಕ್ಕೆ ಬರಲಿಕ್ಕೆ ಬೇಕು."

ಮಹಾದಾಜಿಯ ಸಂಗಡ ಬಂದ ಮರಾಟನು ತಟ್ಟನೆ ಈ ಮಾತುಗಳನ್ನಾಡಿ ದನು. ಆ ಪಿತಾಪುತ್ರರು ಪರಸ್ಪರರ ದರ್ಶನವನ್ನು ತೆಗೆದುಕೊಳ್ಳುತ್ತಿದ್ದಾಗ ಅವನು ಡೇರೆಯೊಳಕ್ಕೆ ಬಂದಿದ್ದನು; ಆದರೆ ಕ್ಷುಬ್ಧವಾದ ಮನಃಸ್ಥಿತಿಯಮೂಲಕ ಬಜಾ ಜೀಖಾನನ ದೃಷ್ಟಿಯು ಅತ್ತಕಡೆಗೆ ಬೀಳಲಿಲ್ಲ.

ಆದುದರಿಂದ ಖಾನನು ಬೆರಗಾಗಿ ಪ್ರಶ್ನೆ ಮಾಡಿದನು. "ನೀನು ಯಾರು?"

ಮಹಾದಾಜಿಯು ಪ್ರೇಮದಿಂದ ಮಾತನಾಡಿದನು. "ಅಪ್ಪಾ, ಶಿವಾಜಿಮಹಾರಾಜರ ಬಲಗೈಯಂತಿರುವ ವೀರರಾದ ತಾನಾಜಿ ಮಾಲಸುರೆಯು ಇವರೇ! ಇವರ ಅಪರಿಮಿತವಾದ ಶೌರ್ಯಧೈರ್ಯಗಳಿಂದ ಶಿವಾಜಿಮಹಾರಾಜರು ಅನೇಕ ಮಹಾರ್ಯಗಳನ್ನು ಮಾಡಿದರು!"

ಖಾನನು ತಾನಾಜಿಯು ಕಯ್ಯನ್ನು ತನ್ನ ಕಯ್ಯಲ್ಲಿ ಹಿಡಿದು ಮಾತನಾಡಿದನು. "ವೀರಾ, ನಿನ್ನ ಅಗಾಧವಾದ ಶೌರ್ಯದ ಖ್ಯಾತಿಯು ವಿಜಾಪುರದ ಬಾದಶಹನ ವರೆಗೆ ಬಂದು ಮುಟ್ಟಿದೆ. ನಿನ್ನನ್ನು ನೋಡಿ ನನಗೆ ಬಹಳೇ ಆನಂದವಾಗಿದೆ. ಈ ಬಜಾಜಿಯು ಭ್ರಷ್ಟನಾಗಿದ್ದರೂ ನಿಜವಾದ ವೀರನ ಬೆಲೆಯು ಆತನಿಗೆ ತಿಳಿಯುವುದು."

ತಾನಾಜಿಯು ಮಾತನಾಡಿದನು. "ಆದುದರಿಂದಲೇ ನಾವು ನಿಮ್ಮಂತಹ ಭೀಷ್ಮಾಚಾರ್ಯರಿಗೆ ಪುಣೆಪಟ್ಟಣಕ್ಕೆ ನಡೆಯಿರೆಂದು ಆಗ್ರಹ ಮಾಡುತ್ತಿದ್ದೇವೆ. ತಮ್ಮ ಆಧಿಪತ್ಯದ ಕೆಳಗೆ ಭೀಷಣಪರಾಕ್ರಮವನ್ನು ತೋರಿಸುವುದಕ್ಕೆ ನಮಗೆ ಸ್ಫುರಣವುಂಟಾಗುವುದು."

"ಆದರೆ ನಾನು ಬಂದು ಏನು ಮಾಡಲಿ? ನಾನು ಮುಸಲ್ಮಾನನಾಗಿದ್ದೇನೆ. ನಾನು ಕುಲಗೇಡಿಯು. ನಾನು ಮನಸ್ಸಿನಿಂದ ಹಿಂದುವಾಗಿದ್ದೇನೆಂದು ಎಷ್ಟೇ ಒದರಿಕೊಂಡರೂ ನನ್ನೊಡನೆ ಸಂಬಂಧವನ್ನಾರು ಇಡುವರು? ಎಲ್ಲರೂ ನನ್ನನ್ನು ಭ್ರಷ್ಟನೆಂದೇ ತಿಳಿಯುವರು. ಆದುದರಿಂದ ನಾನು ಪುಣೆಗೆ ಬಂದರೆ, ನನ್ನ ಮಹಾದಾಜಿಯ ವಿಷಯವಾಗಿ ಜನರಲ್ಲಿರುವ ಸಹಾನುಭೂತಿಯು ಕೂಡ ನಷ್ಟವಾಗಬಹುದು. ನನ್ನ ಸಂಸರ್ಗದಿಂದ ಆತನಿಗೂ ಬಹಿಷ್ಕಾರವುಂಟಾದೀತು. ನಾನು ಒಮ್ಮೆ ಕುಲಗೆಟ್ಟಿರುವೆನಾದುದರಿಂದ ಕೊನೆಯ ವರೆಗೂ ಹಿಂದೂಧರ್ಮಕ್ಕೆ ಎರವಾದೆನು. ನಾನು ಹಿಂದೂಧರ್ಮದ ಸೇವೆಯನ್ನು ಬೇಕಾದಷ್ಟು ರೀತಿಯಿಂದ ಮಾಡಿದರೂ, ಮಹಾರಾಷ್ಟ್ರದೇಶದ ಉದ್ಧಾರಕ್ಕೋಸ್ಕರ ನನ್ನ ದೇಹವನ್ನು ತೇದರೂ ನಾನು ಹಿಂದುವಾಗಲಾರೆನು. ಹಿಂದೂಧರ್ಮದ ದೃಷ್ಟಿಯು ಸಂಕುಚಿತವಾಗಿಲ್ಲ. ಹಿಂದುಸ್ಥಾನದಲ್ಲಿ ಸ್ವರಾಜ್ಯವನ್ನು ಸ್ಥಾಪಿಸುವದಕ್ಕೋಸ್ಕರ ಎಷ್ಟೇ ಪ್ರಯತ್ನಮಾಡಿದರೂ ನಾನು ಮುಸಲ್ಮಾನನು! ಎಲ್ಲರೂ ನನ್ನನ್ನು ಮುಸಲ್ಮಾನನೆಂದೇ ಅನ್ನುವರು! ಅಂದಮೇಲೆ ನಾನು ಬಂದು ಏನು ಮಾಡಲಿ?" ಈ ಪ್ರಕಾರವಾಗಿ ಖಾನನು ಉತ್ತರ ಕೊಟ್ಟನು.

“ ತಾವು ಅನ್ನುವಂತಹ ಸ್ಥಿತಿಯು ಇರುವುದೇನೋ ನಿಜ! ಆದರೆ ಶಿವಾಜಿ ಮಹಾರಾಜರು ಅದ್ವಿತೀಯರಾಗಿದ್ದಾರೆ. ಹಿಂದೂಧರ್ಮದಲ್ಲಿ ಕ್ರಾಂತಿಯನ್ನುಂಟು ಮಾಡುವ ಸಾಮರ್ಥ್ಯವು ಅವರಲ್ಲಿದೆ ಅವರು ನಿಮ್ಮನ್ನು ನಿಜವಾಗಿಯೂ ಮರಾಟರನ್ನು ಮಾಡುವರು. ಅವರು ನಿಮ್ಮನ್ನು ಮತ್ತೆ ಹಿಂದೂಧರ್ಮದಲ್ಲಿ ತೆಗೆದುಕೊಳ್ಳುವರು. ಅವರ ದೃಷ್ಟಿಯು ವಿಶಾಲವಾಗಿದೆ. ಹಿಂದೂಧರ್ಮದ ದೃಷ್ಟಿಯು ಸಂಕುಚಿತವಾಗಿಲ್ಲ; ಸಂಕುಚಿತವಾದುದೆನ್ನುವವರ ಕಣ್ಣುಗಳಲ್ಲಿ ಅವರು ಉತ್ತಮವಾದ ಅಂಜನವನ್ನು ಹಾಕುವರು! ಅವರ ಸಾಮರ್ಥ್ಯವು ಅಪಾರವಾಗಿದೆ! ಅವರು ಶಿವನ ಅವತಾರವಾಗಿದ್ದಾರೆ ನೀವು ಮನಸ್ಸಿನಲ್ಲಿ ಯಾವ ಸಂದೇಹವನ್ನೂ ಹಿಡಿಯದೆ ಪುಣೆಗೆ ನಡೆಯಿರಿ. ”

ಖಾನನು ವಿಚಾರದಲ್ಲಿ ಮಗ್ನನಾದನು. ಏನು ಮಾಡಬೇಕೆಂಬುದು ಆತನಿಗೆ ತಿಳಿಯದಾಯಿತು. ಇತ್ತಿತ್ತಲಾಗಿ ರೋಷನಬೇಗಮಳ ವಿಷಯವಾಗಿ ಅವನಲ್ಲಿ ತಿರಸ್ಕಾರವು ಉತ್ಪನ್ನವಾಗಿತ್ತು; ಆದರೂ ನಿಜವಾಗಿ ಅವಳ ಮೇಲೆ ಖಾನನ ಪ್ರೇಮವಿತ್ತು. ಅವಳ ಸ್ನೇಹಪಾಶವನ್ನು ಒಮ್ಮೆಲೇ ಹರಿದುಬಿಡಲು ಆತನ ಮನಸ್ಸಾಗಲೊಲ್ಲದು. ವಿಜಾಪುರದ ಅದಿಲಶಹನು ಆತನನ್ನು ಐಶ್ವರ್ಯಶಿಖರದ ಮೇಲೆ ಕುಳ್ಳಿರಿಸಿದ್ದನು. ಆದರೆ ಮುಸಲ್ಮಾನರು ಮರಾಟರನ್ನು ಎಷ್ಟು ತುಚ್ಛವಾಗಣಿಸುತ್ತಾರೆಂಬುದೂ, ಮರಾಟರೊಡನೆ ಎಷ್ಟು ಅವಿಶ್ವಾಸದಿಂದ ನಡೆದುಕೊಳ್ಳುತ್ತಾರೆಂಬುದೂ ತಿಳಿದಾಗಿನಿಂದ ಅದಿಲಶಾಹಿಯ ವಿಷಯವಾಗಿದ್ದ ಆತನ ಕೃತಜ್ಞತಾಬುದ್ಧಿಯು ನಷ್ಟವಾಗಿತ್ತು. ಆದರೆ ರೋಷನಳ ಪ್ರೇಮವು ತನ್ನ ಮೇಲೆ ಕುಳಿತಿರುವುದೆಂಬದನ್ನು ಆತನು ಮರೆತಿದ್ದಿಲ್ಲ. ಈಗ ಮಾತ್ರ ಆ ಪ್ರೇಮದ ಗುರುತೇ ಇಲ್ಲದಂತಾಗಿತ್ತು. ಹದಿನೈದು ಹದಿನಾರು ವರುಷಗಳ ಈ ಸಂಬಂಧವನ್ನು ಹರಿದು ಹಾಕಲು ಅವನ ಮನಸ್ಸು ಸಿದ್ಧವಾಗಬಹುದಾಗಿತ್ತು. ಆದರೆ ತಾನು ಸೇರಬೇಕೆನ್ನುತ್ತಿರುವ ಹೊಸ ಸಮಾಜದಲ್ಲಿ ತನಗೆ ಮಾನಮರ್ಯಾದೆಯು ಎಷ್ಟರ ಮಟ್ಟಿಗೆ ದೊರೆಯಬಹುದೆಂಬುದು ಒಂದು ದೊಡ್ಡ ಪ್ರಶ್ನೆಯಾಗಿತ್ತು. ಶಿವಾಜಿಯು ನಿಮ್ಮನ್ನು ನಿಜವಾಗಿಯೂ ಹಿಂದೂಗಳನ್ನಾಗಿ ಮಾಡಿಕೊಳ್ಳುವನೆಂದು ತಾನಾಜಿಯು ಹೇಳಿದರೂ, ಅದರ ಮೇಲೆ ಖಾನನ ವಿಶ್ವಾಸವು ಸ್ಥಿರವಾಗಲೊಲ್ಲದು! ಯಾಕಂದರೆ ಹಿಂದೂಧರ್ಮದವರ ದುರಾಗ್ರಹವು ಅವನಿಗೆ ಗೊತ್ತಿತ್ತು. ಯಾರು ಎರಡನೆಯ ಧರ್ಮದವರ ಕಯ್ಯೊಳಗಿನ ಅನ್ನವನ್ನು ಕೂಡ ಮುಟ್ಟುವುದಿಲ್ಲವೋ,

ಯಾರು ತಮ್ಮ ಮೇಲೆ ಮುಸಲ್ಮಾನರ ನೆರಳುಕೂಡ ಬಿದ್ದರೆ ಮೈಲಿಗೆಯಾಯಿ ತೆಂದು ತಿಳಿಯುತ್ತಾರೋ ಅಂತಹರು ಮುಸಲ್ಮಾನನನ್ನು ಹಿಂದುವನ್ನಾಗೆ ಮಾಡಿ ದರೆ ಸಮ್ಮನಿರುವುದುಂಟೇ ? ನೀಚನಾಗಿದ್ದರೂ, ದೇಶದ್ರೋಹಿಯಾಗಿದ್ದರೂ, ಪರರ ದುಡ್ಡು ತಿನ್ನುವವನಾಗಿದ್ದರೂ, ಸೆರೆಗುಡಕನಾಗಿದ್ದರೂ, ಅನಾಚಾರಿಯಾಗಿ ದ್ದರೂ ಬ್ರಾಹ್ಮಣನ ಹೊಟ್ಟೆಯಿಂದ ಹುಟ್ಟಿದರೆ ಹಿಂದೂಧರ್ಮದವರು ಅವನಿಗೆ ಬ್ರಾಹ್ಮಣನೆಂದು ಅನ್ನುವರು. ಆದರೆ ಸಚ್ಛೀಲನೂ ದೇಶಭಕ್ತನೂ ಆದ ಒಕ್ಕಲಿ ಗನು ಕಡಿಮೆಯವನೆಂದು ತಿಳಿಯುವರು. ಇದನ್ನು ಖಾನನು ತಿಳಿದಿದ್ದನು. ಆದುದರಿಂದ ಆತನ ಮನಸ್ಸಿನಲ್ಲಿ ನಿಶ್ಚಯವಾಗಲಿಲ್ಲ.

ಖಾನನು ಈ ಪ್ರಕಾರದ ವಿಚಾರದಲ್ಲಿ ಮಗ್ನನಾಗಿದ್ದಾಗ ಒಬ್ಬ ಸೇವಕನು ಬೆದರಿದ ಮುಖಮುದ್ರೆಯಿಂದ ಒಳಗೆ ಬಂದನು; ಮತ್ತು ಒಂದೇ ಸಮನೆ ಅಳು ತ್ತಿದ್ದನು. ಖಾನನು ಅವನ ಮೇಲೆ ಹರಿಹಾಯ್ದು ಈ ಪ್ರಕಾರದ ಅತಿಪ್ರಸಂ ಗಕ್ಕೆ ಕಾರಣವೇನೆಂದು ಕೇಳಲು ಅವನು ಹೇಳಲಾರಂಭಿಸಿದನು:—"ಒಡೆಯರೇ, ಆ ಮರಾಟಹುಡುಗೆಯು ತಮ್ಮ ಕಡೆಗೆ ಮತ್ತೆ ಬಂದುದನ್ನು ತಿಳಿದೊಡನೆಯೇ ಬೇಗಮುಸಾಹೇಬರು ಸಂತಾಪದಿಂದ ಅಫ್‍ಝುಲ್‍ಖಾನನ ಶಿಬಿರಕ್ಕೆ ಹೊರಟುಹೋ ದರು. ಹೋಗುವಾಗ ದಶದಿಕ್ಕುಗಳೂ ನನಗೆ ತೆರವಾಗಿಯೇ ಇರುವವೆಂದು ತಮಗೆ ತಿಳಿಸಲಿಕ್ಕೆ ಹೇಳಿದರು. —" ಇಷ್ಟು ಮಾತಾಡಲಿಕ್ಕೆ ಆ ಸೇವಕನಿಗೆ ಬಹಳ ಹೊತ್ತು ಹಿಡಿಯಿತು. ಯಾಕಂದರೆ ಮಾತನಾಡುವಾಗ ಅವನು ಬಹಳ ತೊದಲಿ ಸುತ್ತಿದ್ದನು; ಮತ್ತು ಖಾನನು ಅವನನ್ನು ಬೆದರಿಸುತ್ತಿದ್ದನು. ಪೂರ್ಣವಾದ ಅಭಿಪ್ರಾಯವು ತಿಳಿದ ಬಳಿಕ ಖಾನನ ಕಣ್ಣುಗಳು ಕೆಂಡದಂತೆ ಕೆಂಪಾದವು. ಮುಷ್ಟಿಯಿಂದ ತನ್ನ ಕುತ್ತಿಗೆಯ ಮೇಲೆ ತಾನೇ ಗುದ್ದಿಕೊಂಡನು. ಇದೇ ಸಮ ಯದಲ್ಲಿ ಮಹಾದಾಜಿಯು ಖಾನನ ಕೊರಳಿಗೆ ಕಯ್‍ಹಾಕಿ ಪ್ರೇಮಲವೂ ಕೋಮ ಲವೂ ಆದ ಸ್ವರದಿಂದ ಮಾತನಾಡಿದನು. "ಅಪ್ಪಾ, ನೀವು ನಿಮ್ಮ ಪ್ರೀತಿಯ ಮಗನೊಡನೆ ಪುಣೆಗೆ ಬರುವಿರಲ್ಲವೇ ? "

" ಅಹುದು, ಮಗನೇ, ಮಹಾದಾಜೀ, ನಿನ್ನ ಸಂಗಡ ಪುಣೆಗೆ ಬರುತ್ತೇನೆ. ಹೋಗೋಣ ನಡೆ. ನಿನ್ನ ಹೊರತು ಜಗತ್ತಿನಲ್ಲಿ ನನ್ನವರು ಬೇರೆ ಯಾರಿರುವರು!" ಈ ಪ್ರಕಾರವನ್ನು ಕಂಡು ಆ ಸೇವಕನಿಗೆ ಅತ್ಯಂತಾಶ್ಚರ್ಯವಾಯಿತು.

ಆದರೆ ಆ ಆಶ್ಚರ್ಯವು ಬಹುಕಾಲದ ವರೆಗೆ ತಡೆಯಲಿಲ್ಲ. ಯಾಕಂದರೆ

ತಾನಾಜಿಯು ಆ ಸೇವಕನನ್ನು ಒತ್ತಿ ಹಿಡಿದು ಬಾಯಲ್ಲಿ ಅರಿವೆಯನ್ನು ತುರುಕಿ ಖಾನನ ಮಂಚದ ಕಾಲಿಗೆ ಅವನನ್ನು ಬಿಗಿದುಬಿಟ್ಟನು. ಮತ್ತು ಸಮೀಪದ ತೆರೆಯನ್ನು ಎಳೆದು ಬಿಟ್ಟನು. ಅನಂತರ ನಮ್ರತೆಯಿಂದ ಖಾನನನ್ನು ಕುರಿತು ಹೀಗೆ ಹೇಳಿದನು. "ಸೇನಾಪತಿಸಾಹೇಬರೇ, ಈ ಗೋಪ್ಯವು ಇನ್ನೂ ಕೆಲಹೊತ್ತಿನ ವರೆಗೆ ಬೇರೆಯವರಿಗೆ ತಿಳಿಯಬಾರದೆಂದು ಹೀಗೆ ಮಾಡಿದೆನು. ಆದುದರಿಂದ ಕ್ಷಮಿಸಬೇಕು."

ಖಾನನು ನಕ್ಕು ಮಾತನಾಡಿದನು. "ನೀವು ಶೂರರಾಗಿರುವುದೇನೋ ನಿಜವೇ; ಆದರೆ ಮಂತ್ರಿತ್ವವಾದರೂ ನಿಮ್ಮಲ್ಲಿ ಪೂರ್ಣವಾಗಿದೆ ! ಇರಲಿ. ಇನ್ನು ಮುಂದೆ ಮಾಡತಕ್ಕುದೇನು ?"

ಮುಂದೆ ಏನು ಮಾಡತಕ್ಕುದೆಂಬುದನ್ನು ತಾನಾಜಿಯು ಖಾನನ ಕಿವಿಯಲ್ಲಿ ಹೇಳಿದನು !



## ಹನ್ನೊಂದನೆಯ ಪ್ರಕರಣ



### ವಿಜಯ !






ನಾಜಿಯು ಖಾನನ ಶಿಬಿರಕ್ಕೆ ಬಂದಾಗಿನಿಂದ ಶತ್ರುಗಳ ವೃತ್ತಾಂತವನ್ನೆಲ್ಲ ತಿಳಿದುಕೊಳ್ಳುತ್ತಿದ್ದನಲ್ಲದೆ, ತಿಳಿದುಕೊಂಡ ಸಂಗತಿಯನ್ನೆಲ್ಲ ಆಗಿಂದಾಗ ಶಿವಾಜಿಗೆ ತಿಳಿಸುವ ವ್ಯವಸ್ಥೆಯನ್ನಾದರೂ ಮೊದಲಿನಿಂದಲೇ ಮಾಡಿದ್ದನು. ಬಹಿರ್ಜಿ ಎಂಬ ಸರದಾರರನ್ನೂ, ಒಬ್ಬ ದೂತನನ್ನೂ ಈ ಕೆಲಸದ ಮೇಲೆ ನಿಯಮಿಸಿದ್ದನು. ಅವರು ಆಗಿಂದಾಗ ಇಲ್ಲಿಯ ಸುದ್ದಿಯನ್ನು ಅಲ್ಲಿಗೂ, ಅಲ್ಲಿಯ ಸುದ್ದಿಯನ್ನು ಇಲ್ಲಿಗೂ ಮುಟ್ಟಿಸುತ್ತಿದ್ದರು. ಬೇರೆಯವರು ಒಳಕ್ಕೆ ಪ್ರವೇಶಿಸದಂತೆ ಶತ್ರುಗಳು ಎಷ್ಟೋ ಉತ್ತಮವಾದ ವ್ಯವಸ್ಥೆಯನ್ನು ಇಟ್ಟಿದ್ದರೂ, ಅವರ ಕ್ಷಣೈಕವಾದ ಅವ್ಯವಸ್ಥೆಯನ್ನು ನಿರೀಕ್ಷಿಸಿಕೊಂಡಿದ್ದು

ಒಳಗೆ ಹೋಗಿ ತನ್ನ ಕೆಲಸವನ್ನು ತೀರಿಸಿಕೊಳ್ಳುವ ವಿದ್ಯೆಯು ಬಹಿರ್ಜಿಗೆ ಚೆನ್ನಾಗಿ ಸಾಧಿಸಿತ್ತು. ಆದುದರಿಂದ ಖಾನನ ಶಿಬಿರದಲ್ಲಿ ನಡೆದಂತಹ ಪ್ರತಿಯೊಂದು ಸಂಗತಿಯನ್ನೂ ಆಗಿಂದಾಗ ತಿಳಿಸುತ್ತಿದ್ದನು. ಆ ಧೋರಣದಿಂದಲೇ ಶಿವಾಜಿಯು ತನ್ನ ಸಿದ್ಧತೆಯನ್ನು ನಡೆಯಿಸಿದ್ದನು. ಯಾವ ದಿವಸ ಪಿತಾಪುತ್ರರು ಪರಸ್ಪರರ ದರ್ಶನವನ್ನು ತೆಗೆದುಕೊಂಡರೋ, ಅದೇ ದಿವಸ ಖಾನನ ಶಿಬಿರದ ಮೇಲೆ ದಂಡೆತ್ತಿ ಬರಬೇಕೆಂದು ತಾನಾಜಿಯು ಶಿವಾಜಿಗೆ ತಿಳಿಸಿದ್ದನು.

ಶಿವಾಜಿಯು ರಾತ್ರಿಯಲ್ಲಿ ಮುತ್ತಿಗೆಯನ್ನು ಹಾಕಿ ಖಾನನ ಸೈನ್ಯವನ್ನು ಹಾಳುಮಾಡುವನೆಂದು ತಾನಾಜಿಗೆ ಗೊತ್ತಿತ್ತು. ಆದರೆ ಸೇನಾಪತಿಯಾದ ಬಜಾಜೀಖಾನನು ಶಿವಾಜಿಗೆ ಅನುಕೂಲನಾದುದರಿಂದ ಆ ಕೆಲಸವು ಮತ್ತೂ ಸುಲಭವಾಯಿತು. 'ಶಿವಾಜಿಯು ಸೈನ್ಯದೊಡನೆ ಬಂದು ಅಫ್‌ಝುಲ್‌ಖಾನನ್ನೂ ಆತನ ಸೈನ್ಯವನ್ನೂ ಹಣ್ಣು ಮಾಡಬೇಕು; ಬಜಾಜೀಖಾನನು ತನ್ನ ಸೈನ್ಯವನ್ನು ತಡೆದುಕೊಂಡು ಅಫ್‌ಝುಲ್‌ಖಾನನ ಸಹಾಯರಾಗೆ ಯಾರನ್ನೂ ಹೋಗಗೊಡಬಾರದು; ಅಪ್ಪಣೆಯನ್ನು ಮೀರಿ ಯಾವನಾದರೂ ಹೋಗಹತ್ತಿದರೆ. ತನ್ನ ವಿಶ್ವಾಸಿಕರಾದ ಸೈನಿಕರಿಂದ ಅವನನ್ನು ಹಿಡಿದು ತರಿಸಿ ದಂಡಿಸಬೇಕು." ಎಂದು ತಾನಾಜಿಯು ಬಜಾಜಿಗೆ ಉಪದೇಶಮಾಡಿದನು. ಎಷ್ಟೋ ಸಾರೆ ವಿಚಾರಮಾಡಿ ಕೊನೆಗೆ ಬಜಾಜಿಯು ಈ ಮಾತಿಗೆ ಒಪ್ಪಿಕೊಂಡನು. ನಾನು ಹೀಗೆ ಮಾಡುವುದು ಕೃತಘ್ನತೆಯಾಗುವುದಿಲ್ಲವೇ ? ಎಂಬ ಶಂಕೆಯು ಆತನ ಮನಸ್ಸಿನಲ್ಲಿ ಹುಟ್ಟುತ್ತಿತ್ತು. ಆದರೆ ಹಿಂದೂಧರ್ಮದ ಉದ್ಧಾರಕನ ಪಕ್ಷವನ್ನು ಸ್ವೀಕರಿಸಬೇಕಾದರೆ ಹೀಗೆ ನಡೆದುಕೊಂಡ ಹೊರತು ಗತ್ಯಂತರವೇ ಇಲ್ಲವೆಂದು ತಾನಾಜಿಯು ಆತನನ್ನು ಸಮಾಧಾನಗೊಳಿಸಿದನು.

ಇಂತು ಇತ್ತಕಡೆಗೆ ತಾನಾಜಿಯೂ ಬಜಾಜಿಯೂ ಆಲೋಚನೆಯಲ್ಲಿ ತೊಡಗಿರುವಾಗ ಅಫ್‌ಝುಲ್‌ಖಾನನ ಡೇರೆಯಲ್ಲಿ ರೋಷನಬೇಗಮಳೂ ಅಫ್‌ಝುಲ್‌ಖಾನನೂ ಬಜಾಜಿಯನ್ನು ಹೇಗೆ ಹಾದಿಗೆ ತರಬೇಕೆಂಬುದಾಗಿ ಆಲೋಚಿಸುತ್ತಿದ್ದರು. ಬಜಾಜೀಖಾನನು ತನ್ನ ಆರ್ಜವವನ್ನು ಮಾಡುತ್ತ ಅಲ್ಪಕಾಲದಲ್ಲಿಯೇ ಬಂದೇ ಬರುವನೆಂದು ರೋಷನಳು ತಿಳಿದುಕೊಂಡಿದ್ದಳು. ಹಾಗೆ ಆತನು ತನ್ನ ಬಳಿಯಲ್ಲಿ ಬಂದನಂತರ ಪರಿಪರಿಯಿಂದ ಆತನ ಮಾನಗೇಡುಮಾಡಬೇಕೆಂದು ಅವಳು ಯೋಚಿಸಿದ್ದಳು; ಇಂತಹ ಕುಲಗೇಡಿಯೊಡನೆ ಸಂಸಾರ ಮಾಡುವದಕ್ಕಿಂತ ಈತ

ನನ್ನು ಬಿಟ್ಟುಬಿಟ್ಟು ಶೂರನಾದ ಒಬ್ಬ ಮುಸಲ್ಮಾನ ಸರದಾರನೊಡನೆ ಉಡಿಕೆಯನ್ನು ಮಾಡಿಕೊಳ್ಳುವುದು ಉತ್ತಮವೆಂದು ಅಫ್‌ಝುಲ್‌ಖಾನನು ರೋಷನಗಳಿಗೆ ಬೋಧಿಸುತ್ತಿದ್ದನು ! ಬೇಗಮುಸಾಹೇಬರು ತನ್ನ ಮೇಲೆಯೇ ಕೃಪಾಕಟಾಕ್ಷವನ್ನು ಚಲ್ಲಿದರೆ ತಾನು ಅತ್ಯಂತಧನ್ಯನಾಗುತ್ತೇನೆಂದೂ ಆತನು ಸೂಚಿಸಿದನು.

ಬಜಾಜೀಖಾನನು ತನ್ನ ಕ್ಷಮೆಯನ್ನು ಕೇಳಿಕೊಳ್ಳುವುದಕ್ಕಾಗಿ ಬಂದೇ ಬರುವನೆಂದು ರೋಷನಳು ತಿಳಿದಿದ್ದಳು. ಆದುದರಿಂದ ಅವಳು ನೋಡುವುದಕ್ಕೇನೋ ಅಫ್‌ಝುಲ್‌ಖಾನನೊಡನೆ ಮಾತನಾಡುತ್ತಿದ್ದರೂ, ಆಕೆಯ ಲಕ್ಷ್ಯವೆಲ್ಲ ಬಜಾಜಿಯು ಬರುವ ದಾರಿಯ ಕಡೆಗೇ ಇತ್ತು. ಆದರೆ ರಾತ್ರಿಯಾಗುತ್ತ ಬಂದರೂ ಬಜಾಜಿಯ ಸುದ್ದಿಯೇ ಇಲ್ಲದಾಯಿತು ! ಆದುದರಿಂದ ನನ್ನ ಮೇಲಿನ ಬಜಾಜಿಯ ಪ್ರೇಮವು ಪೂರ್ಣವಾಗಿ ಹಾರಿಹೋಯಿತೆಂದೂ, ಆತನಿಗೆ ನನ್ನ ಲಕ್ಷ್ಯವು ಎಳ್ಳಷ್ಟಾದರೂ ಇಲ್ಲವೆಂದೂ ರೋಷನಳಿಗೆ ಮನವರಿಕೆಯಾಯಿತು. ಆ ಮರಾಟ ಹುಡುಗೆಯ ಮೇಲೆ ಅವಳು ಬಹಳ ಸಿಟ್ಟಾದಳು. ಆ ಹುಡುಗೆಯು ಎದುರಿನಲ್ಲಿದ್ದರೆ ಅವಳ ಕಣ್ಣನ್ನೇ ಕಿತ್ತಿಸಿ ಬಿಡುತ್ತಿದ್ದಳು. ರಾತ್ರಿಯು ಹೆಚ್ಚಾಗುತ್ತ ನಡೆದಂತೆ ರೋಷನಳ ಕ್ರೋಧವು ಬಳೆಯುತ್ತಿತ್ತು. ಬಜಾಜೀಖಾನನನ್ನಾದರೂ ಒಳಿತಾಗಿಯೇ ಶಿಕ್ಷಿಸಬೇಕೆಂದು ಅವಳ ಮನಸ್ಸಿನಲ್ಲಿತ್ತು. ಆದರೆ ಆತನು ಅವಳಿಗೆ ಕಾಣಿಸಲೊಲ್ಲನು ! ಆ ಕ್ರೋಧಾಗ್ನಿಯಲ್ಲಿ ಉರುವಲವನ್ನು ಹಾಕಲು ಬಜಾಜಿಯು ದಕ್ಷನಾಗಿದ್ದನು. ಆ ಸರ್ಪಿಣಿಯ ಸಂತಾಪವು ಅತಿಶಯವಾಯಿತು. ಛಲವನ್ನು ತೀರಿಸಿಕೊಳ್ಳುವ ಇಚ್ಛೆಯು ಪ್ರಬಲವಾಯಿತು; ಆಕೆಯ ಮೈಮೇಲೆ ಎಚ್ಚರವಿಲ್ಲದಾಯಿತು; ಬುದ್ಧಿಯು ಚಂಚಲವಾಯಿತು; ಮತ್ತು ಅಫ್‌ಝುಲ್‌ಖಾನನ ಹೊರತು ಇನ್ನೊಬ್ಬ ತಾರಕನಿಲ್ಲವೆಂದೂ ಆತನ ಹೊರತು ಸೇಡು (ಛಲ) ತೀರಿಸಿಕೊಳ್ಳಬೇಕೆಂಬ ತನ್ನ ಅಭಿಲಾಷೆಯನ್ನು ಪೂರ್ಣಮಾಡುವ ವೀರರು ಜಗತ್ತಿನಲ್ಲಿ ಬೇರೆ ಯಾರೂ ಇಲ್ಲವೆಂದೂ ಅವಳು ಭಾವಿಸಿದಳು; ತನ್ನ ಮೇಲೆ ಆತನೇ ಪ್ರೇಮವನ್ನಿಡುವನು; ತನ್ನ ಇಚ್ಛೆಯನ್ನು ಆತನೇ ಪೂರ್ಣಮಾಡುವನು; ತಾನು ಇಷ್ಟು ದಿವಸಗಳ ವರೆಗೆ ಸಾಕಿದ ನಾಯಿಯು ಮೇಲಣ ಛಲವನ್ನು ಆತನೇ ತೀರಿಸುವನು; ಎಂದು ತಿಳಿದು ರೋಷನಳು ಅಫ್‌ಝುಲ್‌ಖಾನನ ಕೊರಳಿಗೆ ಬಿದ್ದಳು ! ಆ ಸರ್ಪಿಣಿಯ ಹಸ್ತಗಳಿಂದ ಆತನ ಕಂಠವು ವೇಷ್ಟಿತವಾಗಲು ಅಫ್‌ಝುಲ್‌ಖಾನನಂತಹ ರಾಕ್ಷಸೀಸರದಾರನು ಕೂಡ ಕ್ಷಣಹೊತ್ತು

ಸ್ತಂಭಿತನಾದನು. ಆಗಲವಳು ಅಫ್‌ಝುಲ್‌ಖಾನನನ್ನು ಗಟ್ಟಿಯಾಗಿ ಅಪ್ಪಿಕೊಂಡು ನುಡಿದಳು. "ಆ ನಾಯಿಯನ್ನು......"

ಮುಂದಿನ ಶಬ್ದಗಳು ಕೇಳಿಸಲಿಲ್ಲ. ಯಾಕಂದರೆ ರೋಷನಳು ಮುಂದೆ ಮಾತಾಡುವಷ್ಟರಲ್ಲಿಯೇ "**ಹರ ಹರ ಮಹಾದೇವ!**" ಎಂಬ ಗರ್ಜನೆಯು ಆ ಸ್ಥಳವನ್ನೆಲ್ಲ ವ್ಯಾಪಿಸಿತು. ಅದು ಮರಾಟರ ಸಿಂಹನಾದವಾಗಿತ್ತು; ಅದು ಮೃತರಾಷ್ಟ್ರದ ಶರೀರದಲ್ಲಿ ಚೈತನ್ಯವನ್ನು ತುಂಬುವ ಸಂಜೀವಿನೀಮಂತ್ರವಾಗಿತ್ತು. ಆ ಗರ್ಜನೆಯು ಅತ್ಯಂತಸ್ಫೂರ್ತಿದಾಯಕವಾಗಿತ್ತು ಆದರೆ ಆ ಗರ್ಜನೆಯನ್ನು ಕೇಳಿದೊಡನೆ ಅಫ್‌ಝುಲ್‌ಖಾನನಿಗೂ ರೋಷನಳಿಗೂ ಹೌಹಾರಿ ಹೋಯಿತು. ಮರಾಟರು ಇಷ್ಟು ಆಕಸ್ಮಿಕವಾಗಿ ತಮ್ಮನ್ನು ಹೇಗೆ ಮುತ್ತಿದರೆಂಬುದು ಅವರಿಗೆ ತಿಳಿಯದಾಯಿತು. ಆದರೆ ಅದು ಆಶ್ಚರ್ಯದಿಂದ ಬೆರಗಾಗಿ ಕುಳಿತುಕೊಳ್ಳುವ ಸಮಯವಾಗಿದ್ದಿಲ್ಲ. ಮರಾಟರ ಗರ್ಜನೆಯು ಬಳೆಯುತ್ತಲೇ ಇತ್ತು; ಮತ್ತು ಆ ಸಿಂಹಗರ್ಜನೆಯ ಸಂಗಡಲೇ "ಯಾಅಲ್ಲಾ ! ದುಸ್ಮಾನನೇ ಕಾಟಾ ತೋಬಾ ತೋಬಾ !!!" ಎಂಬ ವಿಲಾಪವೂ ಕೇಳಿಸ ಹತ್ತಿತು.

ಅಫ್‌ಝುಲ್‌ಖಾನನು ಡೇರೆಯ ಹೊರಗೆ ಬರಲು ಯತ್ನಿಸಿದನು. ಆದರೆ ರೋಷನಳು ಆತನ ಬೆನ್ನುಬಿಡಲಿಲ್ಲ. ನನ್ನೊಬ್ಬಳನ್ನೇ ಸಂಕಟದಲ್ಲಿ ನೂಕಿ ಹೊರಟು ಹೋಗಬೇಡಿರೆಂದು ಅವಳು ಬೇಡಿಕೊಳ್ಳಲಾರಂಭಿಸಿದಳು. ಬಾದಶಹನ ಪ್ರೀತಿಯ ಮಗಳನ್ನು ಹಾಗೆಯೇ ಬಿಟ್ಟು ಹೋಗುವುದು ಅವನಿಗೂ ಶಕ್ಯವಿದ್ದಿಲ್ಲ. ಆದರೂ ಹೊರಗಿನ ಪುಂಡಾಟಿಕೆಯು ಹೆಚ್ಚಾಗಿರಲಿಕ್ಕಿಲ್ಲವೆಂದು ತಿಳಿದು ಅವನು ಆಕೆಯನ್ನು ಹೇಗೋ ಸಮಾಧಾನಮಾಡಿದನು. ನಾನು ಹೊರಗೆ ಹೋಗಿ ಗಲಭೆಯನ್ನು ಶಾಂತಮಾಡುತ್ತೇನೆ; ನೀನು ಚಿಂತಿಸಬೇಡ; ಎಂದು ಅವಳಿಗೆ ಉಪದೇಶಮಾಡಿದನು. ಬಹಳ ಮಾಡಿ ಸಂಕಟವು ಪ್ರಾಪ್ತವಾಗುವ ಸಂಭವವೇ ಇಲ್ಲ; ಒಂದು ವೇಳೆ ಸ್ವಲ್ಪಾದರೂ ಭಯದ ಲಕ್ಷಣವು ತೋರಿಬಂದರೆ ನಿನ್ನನ್ನು ಎಲ್ಲಿಯಾದರೂ ಒಂದು ಸುರಕ್ಷಿತವಾದ ಸ್ಥಾನದಲ್ಲಿ ಇಟ್ಟು ಬರುತ್ತೇನೆಂದು ಆತನು ಪ್ರತಿಜ್ಞೆಯನ್ನಾದರೂ ಮಾಡಿದನು. ಆಗ ಅವಳ ಜೀವದಲ್ಲಿ ಜೀವ ಬಂತು.

ಅಫ್‌ಝುಲ್‌ಖಾನನಿಗೆ ಮರಾಟರು ಬಹಳೇ ತುಚ್ಛರಾಗಿ ಕಾಣುತ್ತಿದ್ದರು. ಅದರಲ್ಲಿಯೂ ಶಿವಾಜಿಯನ್ನಂತೂ ಆತನು ಲೆಕ್ಕಿಸುತ್ತಲೇ ಇರಲಿಲ್ಲ. ಮರಾಟರು ಆಕಸ್ಮಿಕವಾಗಿ ತಮ್ಮ ಮೇಲೆ ಬಂದು ಬಿದ್ದುದರಿಂದಲೂ, ತನ್ನ ಸೈನ್ಯವು ಸದ್ಯಕ್ಕೆ

ಸಿದ್ಧವಾಗಿಲ್ಲದುದರಿಂದಲೂ ಮೊದಲು ಸ್ವಲ್ಪ ಹೆದರಿದನು; ಆದರೂ ಅಲ್ಪಾವಧಿಯಲ್ಲಿಯೇ ಎಲ್ಲವನ್ನೂ ವ್ಯವಸ್ಥೆಗೊಳಿಸಿ ಮರಾಟರನ್ನು ಓಡಿಸಿಬಿಡುವೆನೆಂದು ಅಫ್‌ಝುಲ್‌ಖಾನನು ತಿಳಿದುಕೊಂಡಿದ್ದನು. ಆದರೆ ಹೊರಗೆ ನೋಡುವಷ್ಟರಲ್ಲಿ ಮುಸಲ್ಮಾನರೆಲ್ಲರೂ ದಾರಿ ಸಿಕ್ಕಕಡೆಗೆ ಓಡಿಹೋಗುತ್ತಿರುವುದು ಆತನ ಕಣ್ಣಿಗೆ ಬಿತ್ತು. ಅವರಿಗೆ ಯಾವ ಲಕ್ಷ್ಯವೂ ಇದ್ದಿಲ್ಲ. ಅಲ್ಲಲ್ಲಿ ಹೆಣಗಳು ಬಿದ್ದಿದ್ದವು- ಮರಾಟರ ಕುದುರೆಯ ಸವಾರರು '**ಹರಹರಮಹಾದೇವ!**' ಎಂದು ಗಂಭೀರವಾಗಿ ಗರ್ಜಿಸುತ್ತ ಶಿಬಿರವನ್ನೆಲ್ಲ ಹಾಳುಮಾಡುತ್ತಿದ್ದರು. ಈ ಪ್ರಕಾರದ ಸ್ಥಿತಿಯು ಹೇಗೆ ಉಂಟಾಯಿತೆಂಬುದೇ ಖಾನನಿಗೆ ಗೊತ್ತಾಗಲಿಲ್ಲ. ಕಟ್ಟಕಡೆಗೆ ಅವನು ಓಡಿ ಹೋಗುತ್ತಿದ್ದ ಒಬ್ಬ ಶಿಪಾಯಿಯನ್ನು ನಿಲ್ಲಿಸಿ (ತರುಬಿ)ದನು. ಮೊದಲು ಮೊದಲು ಆ ಶಿಪಾಯಿಯು ಖಾನನ ಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ. ಆದರೆ ಖಾನನು ತನ್ನ ಅಜಸ್ರುವಾದ ಸಾಮರ್ಥ್ಯವನ್ನು ವೆಚ್ಚಮಾಡಿ ಆತನನ್ನು ಬಿಗಿದು ಹಿಡಿದನು; ಆಗ ಆ ಶಿಪಾಯಿಯು ಓಡಿಹೋಗುವುದೆಂತು? ಅನಿವಾರ್ಯವಾಗಿ ಆತನು ನಿಲ್ಲಲೇ ಬೇಕಾಯಿತು. ವಸ್ತುಸ್ಥಿತಿಯನ್ನು ಕುರಿತು ಖಾನನು ಪ್ರಶ್ನೆ ಮಾಡಲು ಆತನು ಉತ್ತರವನ್ನಿತ್ತನು. "ಮರಾಟರ ದೊಡ್ಡ ಸೈನ್ಯವು ಬಂದಿರುತ್ತದೆ. ನಮ್ಮ ಸೇನೆಯೊಳಗಿನ ಬಹುಜನರನ್ನು ಅವರು ಈಗ ಕೊಂದಿದ್ದಾರೆ. ಆದುದರಿಂದ ಉಳಿದ ದಂಡಾಳುಗಳು ಪ್ರಾಣದ ಭೀತಿಯಿಂದ ಪಲಾಯನ ಮಾಡುತ್ತಿದ್ದಾರೆ."

"ಸೇನಾಪತಿಗಳಾದ ಬಜಾಜೀಖಾನರು ಈಗ ಏನು ಮಾಡುತ್ತಿದ್ದಾರೆ? ಈ ಕಾಲದಲ್ಲಿ ಕೂಡ ಅವರು ಆ ಮರಾಟಹುಡುಗಿಯೊಡನೆ ಪ್ರೇಮಸಂಭಾಷಣೆ ಮಾಡುತ್ತ ಕುಳಿತುಕೊಂಡಿದ್ದಾರೇನು!" ಖಾನನು ಹಲ್ಲುಕಡಿಯುತ್ತ ಹೀಗೆ ಪ್ರಶ್ನೆಮಾಡಿದನು. ಇದೇ ಕಾಲದಲ್ಲಿ ನಾಲ್ಕಾರು ಜನ ಮುಸಲ್ಮಾನ ಶಿಪಾಯರು ಮೈಮೇಲೆ ಎಚ್ಚರವಿಲ್ಲದೆ ಜೀವದ ಆಶೆಯಿಂದ ಓಡಿಹೋಗುತ್ತಿದ್ದರು. ಅವರು ಅಫ್‌ಝುಲ್‌ಖಾನನನ್ನು ನೋಡಿದೊಡನೆಯೇ ಕ್ಷಣಹೊತ್ತು ನಿಂತುಕೊಂಡು ಹೀಗೆ ಹೇಳಿದರು. "ಸರದಾರಸಾಹೇಬರೇ, ಜೀವದಿಂದ ಉಳಿಯಬೇಕೆಂಬ ಇಚ್ಛೆಯಿದ್ದರೆ ಬೇಗನೇ ಇಲ್ಲಿಂದ ಓಡಿಹೋಗಿರಿ. ಈಗ ಒಂದೊಂದು ಕ್ಷಣವು ಕೂಡ ಬೆಲೆಯುಳ್ಳದ್ದಾಗಿದೆ. ಸೇನಾಪತಿಸಾಹೇಬರು ಮರಾಟರ ಸೇನೆಯನ್ನು ಕೂಡಿಕೊಂಡರು. ಇಷ್ಟೇ ಅಲ್ಲ; ಅವರ ಸೇನೆಯೊಳಗಿನ ಮರಾಟರೆಲ್ಲ ಬಂಡುಗಾರರನ್ನು ಸೇರಿಕೊಂಡು ಮುಸಲ್ಮಾನರನ್ನು ನಾಶಮಾಡುತ್ತಿದ್ದಾರೆ. ಸೇನಾಪತಿಗಳ ಕಟಾಕ್ಷವು ತಮ್ಮ

ಮೇಲೆ ಬಹಳವಿದೆ. ಆದುದರಿಂದ ತಾವು ಒಂದು ವೇಳೆ ಮರಾಟರ ಕಯ್ಯಲ್ಲಿ ಸಿಕ್ಕರೆ ತಮ್ಮ ಪರಿಣಾಮವು ನೆಟ್ಟಗಾಗುವುದಿಲ್ಲ" ಇಷ್ಟು ಮಾತನಾಡಿ ಅವರು ಓಡಿಹೋದರು.

ಅಫ್‌ಝುಲ್‌ಖಾನನಿಗೆ ಅತ್ಯಂತಸಂತಾಪವಾಯಿತು. ಆದರೆ ಮಾಡುತ್ತಾನೇನು? ಮರಾಟ ಸರದಾರರ '**ಹರ ಹರ ಮಹಾದೇವ!**' ಎಂಬ ಗರ್ಜನೆಯ ಹೊರತು ಬೇರೆ ಸ್ವರವೇ ಆ ವೇಳೆಯಲ್ಲಿ ಕೇಳಬರುತ್ತಿದ್ದಿಲ್ಲ. ಅವನು ನಾಲ್ಕೂ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿದನು. ಆದರೆ ಎಲ್ಲ ಕಡೆಗೂ ಒಂದೇ ಪ್ರಕಾರದ ನೋಟವೇ ಅವನಿಗೆ ಕಾಣಿಸಿತು! ಇಷ್ಟರಲ್ಲಿ ಮರಾಟರ ಒಂದು ಹಿಂಡು ಲೂಟಿಯನ್ನು ಮಾಡುತ್ತ ತನ್ನ ಡೇರೆಯ ಕಡೆಗೇ ಬರುತ್ತಿರುವುದನ್ನು ಅವನು ಕಂಡನು. ಈಗ ಮರಾಟರ ಹಿಂಡಿಗೆ ಯಾವ ಪ್ರತಿಬಂಧಕವೂ ಇದ್ದಿಲ್ಲ. ಯಾಕಂದರೆ ಬಹುತರವಾಗಿ ಮುಸಲ್ಮಾನರೆಲ್ಲರೂ ಧಾರಾತೀರ್ಥದಲ್ಲಿ ಮಲಗಿಕೊಂಡಿದ್ದರು, ಉಳಿದ ಅಲ್ಪಸ್ವಲ್ಪ ಜನರು ವಿಜಾಪುರದ ಹಾದಿಯನ್ನು ಹಿಡಿದಿದ್ದರು. ಆದುದರಿಂದ ಅಫ್‌ಝುಲ್‌ಖಾನನ ಧೈರ್ಯವು ಕುಂದಿತು. ಅವನು ತ್ವರೆಯಿಂದ ಡೇರೆಯ ಒಳಕ್ಕೆ ಬಂದನು. ಅವನು ಮರಳಿ ಬರುವ ವರೆಗೆ ರೋಷನ ಬೇಗಮಳಿಂದ ತಡೆಯುವುದಾಗಲಿಲ್ಲ. ಹೊರಗೆ ನಡೆದಿರುವ ರಣಗರ್ಜನೆಯನ್ನು ಕೇಳಿ ಆಕೆಯು ಅಂಜಿದಳು; ಆದುದರಿಂದ ಖಾನನ ಡೇರೆಯೊಳಗಿನ ಒಂದು ಕುದುರೆಯ ಮೇಲೆ ಹತ್ತಿಕೊಂಡು ಒಬ್ಬ ಸೇವಕನನ್ನು ಸಂಗಡ ಕರೆದುಕೊಂಡು ಅವಳು ಮೊದಲೇ ವಿಜಾಪುರದ ಕಡೆಗೆ ಹೊರಟುಹೋಗಿದ್ದಳು. ಆದುದರಿಂದ ಅಫ್‌ಝುಲ್‌ಖಾನನು ಡೇರೆಯೊಳಕ್ಕೆ ಬಂದೊಡನೆಯೇ ರೋಷನ ಬೇಗಮಳು ಅವನಿಗೆ ಕಾಣಿಸಲಿಲ್ಲ. ಸೇವಕ ಜನರಂತೂ ಒಬ್ಬರೂ ಇದ್ದಿಲ್ಲ. ಆದುದರಿಂದ ಅವನೂ ಒಂದು ಕುದುರೆಯನ್ನು ಹತ್ತಿ ರೋಷನಬೇಗಮಳ ಶೋಧಕ್ಕಾಗಿಯೇ ಹೊರಹೊರಟನು.

ಇಷ್ಟರಲ್ಲಿ ಮರಾಟರ ಒಂದು ಹಿಂಡಿನವರು ಅಫ್‌ಝುಲ್‌ಖಾನನನ್ನು ಕಂಡರು; ಅವರು ಖಾನನನ್ನು ಬೆನ್ನಟ್ಟಿದರು. ಖಾನನು ಬದುಕುವ ಆಶೆಯಿಂದ ಪಲಾಯನವನ್ನು ಆಶ್ರಯಿಸಲೇ ಬೇಕಾಯಿತು. ಮರಾಟರಾದರೂ ಅವನಷ್ಟೇ ವೇಗದಿಂದ ಆತನ ಬೆನ್ನುಹತ್ತಿದರು. ಮರಾಟರ ಹತ್ತರ ಹಿಲಾಲುಗಳಿದ್ದುವು. ಅವುಗಳ ಪ್ರಕಾಶವು ಖಾನನ ವಿಶಾಲದೇಹದಮೇಲೆ ಬಿದ್ದೊಡನೆಯೇ ಅವರೊಳಗಿನವನೊಬ್ಬನು ಮಾತನಾಡಿದನು. "ಮಿತ್ರರೇ, ಈ ಕೃತಘ್ನನನ್ನು ಹಿಡಿದು ಒಳ್ಳೆ ತಾಗಿ ಶಿಕ್ಷೆಯನ್ನು ಮಾಡಬೇಕು. ಈ ನೀಚನೇ ಅನೇಕದೇವಾಲಯಗಳನ್ನು ಹಾಳು

ಮಾಡಿ ಮೂರ್ತಿಗಳನ್ನು ಭ್ರಷ್ಟಗೊಳಿಸಿದ್ದಾನೆ. ಅನೇಕಜನರನ್ನು ಕುಲಗೆಡಿಸಿ ದವನೂ, ಹಿಂದೂಸ್ತ್ರೀಯರನ್ನು ಅವಮಾನಗೊಳಿಸಿದವನೂ, ನರಾಧಮನೂ ಆದ ಅಫ್‌ಝುಲ್‌ಖಾನನೇ ಇವನು! ”

ಖಾನನು ಹಿಂದಿರುಗಿ ನೋಡಿದನು; ಎಲ್ಲರೂ ಆತನ ಪರಿಚಯವನ್ನು ಹಿಡಿದರು. ಹಿಂದೂಧರ್ಮದ ವೈರಿಯಾದ ಈ ನೀಚನನ್ನು ನಾಶಮಾಡಬೇಕೆಂದು ಎಲ್ಲರಿಗೂ ಅಪೇಕ್ಷೆಯಾಯಿತು. ! ಇಷ್ಟರಲ್ಲಿ ಆ ಹಿಂದಿನ ಅಧಿಪತಿಯು ಎಲ್ಲರಿಗೂ ಹೀಗೆ ಹೇಳಿದನು. “ ಮಿತ್ರರೇ, ಇವನನ್ನು ಕೊಲ್ಲಬೇಡಿರಿ; ಜೀವಸಹಿತವಾಗಿ ಹಿಡಿಯಿರಿ; ಈತನು ನಮ್ಮ ಧರ್ಮದ ಶತ್ರುವು. ಈತನನ್ನು ಶಿವಾಜಿಮಹಾರಾಜರ ಕಡೆಗೆ ಒಯ್ಯೋಣ. ನಮ್ಮ ಮಹಾರಾಜರು ಹಿಂದೂಧರ್ಮವನ್ನು ಉದ್ಧಾರ ಮಾಡುವದಕ್ಕಾಗಿಯೇ ಅವತರಿಸಿದ್ದಾರೆ. ಅವರೇ ಈತನ ವಿಚಾರಮಾಡಿ ಯೋಗ್ಯದಂಡನೆಯನ್ನು ವಿಧಿಸಲಿ. ಇಂತಹ ಪಾಪಿಷ್ಠನ ಕಂಠಸ್ಥಾನವನ್ನು ಖಡ್ಗದಿಂದ ಕತ್ತರಿಸಿದರೆ ನಮ್ಮ ಖಡ್ಗಕ್ಕೇ ಅಪಮಾನವಾಗುವದು! ಇವನನ್ನು ನಾಯಿಯಿಂದ ತಿನ್ನಿಸಬೇಕು. ಮಹಾರಾಜರಾದರೂ ಈ ನೀಚನನ್ನು ಸಂಹರಿಸಿದ ಹೊರತು ಹಿಂದೂಧರ್ಮಕ್ಕೆ ಸ್ವಾಸ್ಥ್ಯವುಂಟಾಗಲಾರದೆಂದು ಅನ್ನುತ್ತಿದ್ದರು ! ಈ ಮಾತನ್ನು ಕೇಳಿದೊಡನೆಯೇ ಎಲ್ಲರ ಖಡ್ಗಗಳೂ ಒರೆಯೊಳಗಿಂದ ಹೊರಗೆ ಮೆರೆಯಹತ್ತಿದುವು. ಅವರು ಖಾನನನ್ನು ಮೊದಲಿಗಿಂತಲೂ ಹೆಚ್ಚು ಉತ್ಸಾಹದಿಂದ ಬೆನ್ನಟ್ಟಿದರು !

ಈ ಮಾತುಗಳಿಂದ ಖಾನನ ಎದೆಯಲ್ಲಿ ಬರ್ಚಿಯಿಂದ ಚುಚ್ಚಿದಂತಾಯಿತು. ಶಿವಾಜಿಯ ಮೇಲೆಯೂ ಮರಾಟರ ಮೇಲೆಯೂ ಆತನು ಬಹಳವಾಗಿ ಸಂತಾಪಗೊಂಡನು. ಆದರೆ ಮಾಡುತ್ತಾನೇನು ? ಅವರು ಒಂದೇ ಸವನೆ ಕುದುರೆಯನ್ನು ಓಡಿಸುತ್ತಿದ್ದರು. ಖಾನನ ಕುದುರೆಯೂ ಉತ್ತಮವಾಗಿತ್ತು. ಆದರೂ ಹಿಂದಿನಿಂದ ಎಷ್ಟೋ ಮರಾಟರು ಬೆನ್ನು ಹತ್ತಿದುದರಿಂದ ಖಾನನಿಗೆ ಧೈರ್ಯವಿಲ್ಲದಂತಾಗಿತ್ತು. ಇನ್ನು ಸ್ವಲ್ಪವೇಳೆಯಲ್ಲಿಯೇ ಖಾನನು ಮರಾಟರ ಕೈಯಲ್ಲಿ ಸಿಕ್ಕುತ್ತಿದ್ದನು ; ಆದರೆ ಅವನ ದೈವವು ಬಲವಾಗಿತ್ತು. ಯಾಕೆಂದರೆ ಅಷ್ಟರಲ್ಲಿ ರಣಕಹಳೆಯ ಧ್ವನಿಯು ಕೇಳಬಂತು. ಆ ಧ್ವನಿಯು “ ನಿಂತ ಸ್ಥಳದಿಂದಲೇ ತಿರುಗಿ ಹೊರಟು ಬರಬೇಕು. ” ಎಂಬ ಶಿವಾಜಿಯ ಆಜ್ಞೆಯ ದ್ಯೋತಕವಾಗಿತ್ತು. ಮುತ್ತಿಗೆಯ ಕೆಲಸವು ಮನಸ್ಸಿಗೆ ತಕ್ಕಂತೆ ನೆರವೇರಿ

ದುದರಿಂದ ತನ್ನ ಸೈನಿಕರೆಲ್ಲರಿಗೂ ತಿರುಗಿ ಬರಬೇಕೆಂದು ಶಿವಾಜಿಯು ಅಪ್ಪಣೆ ಮಾಡಿದನು ಮರಾಟರು ಶಿವಾಜಿಯನ್ನು ದೇವರೆಂದು ತಿಳಿಯುತ್ತಿದ್ದರಾದು ದರಿಂದ ರಣಕಹಳೆಯ ಧ್ವನಿಯನ್ನು ಕೇಳಿದೊಡನೆಯೇ ತಮ್ಮ ಕುದುರೆಗಳನ್ನು ತಿರುಗಿಸಿದರು. ಶಿವಾಜಿಯ ಅಪ್ಪಣೆಯನ್ನು ಯಾರಾದರೂ ಮೀರಬಹುದೇ ? ಇಂತಹ ಶತ್ರುವು ಕಯ್ಯೊಳಗಿಂದ ಪಾರಾದನೆಂದು ಆ ಸೇನಾನಾಯಕನಿಗೆ ಮಾತ್ರ ಸ್ವಲ್ಪ ಕೆಡಕೆನಿಸಿತು. ಆದರೂ, ಅವನು ದೊಡ್ಡ ದನಿಯಿಂದ ಒದರಿ ಕೇಳಿದನು. "ನೀಚಾ, ನಮ್ಮ ಮಹಾರಾಜರ ಆಜ್ಞೆಯಿಂದ ನಿನಗೆ ಇಂದು ಜೀವವು ಉಳಿಯಿತು. ಹೋಗು, ನಿನ್ನ ವರ್ತನವನ್ನು ತಿದ್ದಿಕೋ ! ಇನ್ನೊಮ್ಮೆ ಈ ಪ್ರಕಾರದಿಂದ ವರ್ತಿಸಿದರೆ ಹಿಂದೂಧರ್ಮದ ಮೂರ್ತಿಮತ್ಪರಮೇಶ್ವರನ ಮುಂದೆ ನಿನ್ನ ಪಾಪದ ಪ್ರಾಯಶ್ಚಿತ್ತವನ್ನು ಹೊಂದಬೇಕಾಗುವುದು."

ಹೀಗೆ ಅಫ್‌ಝುಲ್‌ಖಾನನು ಪ್ರಾಪ್ತಸಂಕಟದಿಂದ ಮುಕ್ತನಾದನು; ಮರಾಟರಾದರೂ ತಮ್ಮ ಪ್ರಭುವಿನ ಕಡೆಗೆ ಹೊರಟುಹೋದರು

ಈ ಲೂಟಿಯಲ್ಲಿ ಮರಾಟರಿಗೆ ಅಪರಿಮಿತ ದ್ರವ್ಯವು ದೊರೆಯಿತು. ಕುದುರೆಗಳು, ಒಂಟೆಗಳು, ಡೇರೆಗಳು, ಖಡ್ಗಗಳು, ಧಾನ್ಯ, ಮದ್ದುಗುಂಡು ಮೊದಲಾದ ಅಗಣಿತಸಾಮಗ್ರಿಯು ಸಿಕ್ಕಿತು. ಆದುದರಿಂದ ವಿಜಾಪುರದವರೊಡನೆ ಮುಂದೆ ಮಾಡಬೇಕಾಗಿರುವ ಯುದ್ಧಕ್ಕೆ ಯಾವ ತರದಿಂದಲೂ ಹೊಸ ಸಿದ್ಧತೆಯನ್ನು ಮಾಡುವ ಆವಶ್ಯಕತೆಯು ಶಿವಾಜಿಗೆ ಉಳಿಯಲಿಲ್ಲ; ಆದರೆ ಈ ಮುತ್ತಿಗೆಯಿಂದಾದ ಮುಖ್ಯಪ್ರಯೋಜನವೆಂದರೆ:— ಮುಸಲ್ಮಾನರ ಪಕ್ಷವನ್ನು ಹಿಡಿದಂತಹ ನಾಲ್ಕಾರು ಮರಾಟಸರದಾರರು ತಮ್ಮ ತಮ್ಮ ಸೈನ್ಯದೊಡನೆ ಶಿವಾಜಿಯನ್ನು ಸ್ಥಿರವಾಗಿ ಸೇರಿಕೊಂಡುದು !

ಮುತ್ತಿಗೆಯ ಜನರೆಲ್ಲರೂ ಸ್ವಂತ ಶಿಬಿರಕ್ಕೆ ಹೋಗಿ ಮುಟ್ಟಿದ ಬಳಿಕ ತಾನಾಜಿಯೂ ಮಹಾದಾಜಿಯೂ ಶಿವಾಜಿಯನ್ನು ನಮಸ್ಕರಿಸಿದರು; ಮತ್ತು ಪ್ರಸಿದ್ಧಸೇನಾಪತಿಯಾದ ಬಜಾಜಿನಿಂಬಾಳಕರನು ತಮ್ಮ ಭೆಟ್ಟಿಗಾಗಿ ಬರುತ್ತಿರುವನೆಂದು ತಿಳಿಸಿದರು. ಶಿವಾಜಿಯು ಇದನ್ನು ಕೇಳಿ ನಿಂಬಾಳಕರನನ್ನು ಎದುರುಗೊಳ್ಳಲಿಕ್ಕೆಬಂದನು; ನಿಂಬಾಳಕರನು ಸಾವಕಾಶವಾಗಿ ಬರುತ್ತಿದ್ದನು. ಶಿವಾಜಿಭೋಸಲೆಯು ತನಗೆ ಯಾವ ಪ್ರಕಾರದಿಂದ ಸ್ವಾಗತಮಾಡುತ್ತಾನೋ ಎಂಬ ಚಿನ್ತೆಯು ಅವನಿಗಿತ್ತು. ಆದರೆ ಶಿವಾಜಿಯು ಕಾಲಿನಿಂದಲೇ ನಡೆಯುತ್ತ

ಎದುರಿಗೆ ಬಂದುದನ್ನು ನೋಡಿ ಬಜಾಜಿಗೆ ಸಮಾಧಾನವಾಯಿತು. ಇಬ್ಬರೂ ಪರಸ್ಪರರನ್ನು ಆಲಿಂಗಿಸಿದರು. ಬೀಗ ಬೀಗರಿಗೆ ಬಹು ದಿವಸದಿಂದಲೂ ಭೆಟ್ಟಿಯಾಗಿದ್ದಿಲ್ಲ; ಆದುದರಿಂದ ಆ ದಿವಸ ಇಬ್ಬರಿಗೂ ಅತ್ಯಾನಂದವಾಯಿತು !

**ಬಜಾಜಿ:**—ತಾವು ಮಹಾದಾಜಿಗೆ ಆಶ್ರಯವನ್ನು ಕೊಟ್ಟದ್ದು ತಮ್ಮ ಘನತೆಗೆ ಶೋಭಿಸತಕ್ಕುದಾಗಿದೆ. ತಮ್ಮ ಈ ಉಪಕಾರವನ್ನು ನಾನು ಹೇಗೆ ತೀರಿಸಲಿ ?

ಶಿವಾಜಿಯು ನಗುತ್ತ ಮಾತನಾಡಿದನು:—"ನಿಂಬಾಳಕರರ ಮನೆತನದವರು ಅತ್ಯಂತಸ್ವಾಭಿಮಾನಿಗಳು. ಮಹಾದಾಜಿಯು ಇದಕ್ಕೇನೂ ಅಪವಾದವಾಗಿಲ್ಲ. ನಿಮ್ಮಲ್ಲಿ ಹೋಗಿ ಇರೆಂದು ಆತನಿಗೆ ನಾವು ಬಹಳ ಆಗ್ರಹಮಾಡಿದೆವು; ಆದರೆ ಅದು ಅವನ ಮನಸ್ಸಿಗೆ ಬರಲಿಲ್ಲ. ನಮ್ಮ ಮಾತೃಶ್ರೀಯವರು ಮೇಲಿಂದ ಮೇಲೆ ಆತನ ಕ್ಷೇಮಸಮಾಚಾರವನ್ನು ತೆಗೆದುಕೊಳ್ಳುತ್ತಿದ್ದರು; ಆದುದರಿಂದ ತಾವು ಅನ್ನತಕ್ಕುದೆಲ್ಲವನ್ನೂ ನಮ್ಮ ಅವ್ವನಿಗೇ ಅನ್ನಿರಿ. ಯಾಕಂದರೆ ಯಾವ ಕೆಲಸವನ್ನು ನಾನು ಮಾಡಿಲ್ಲವೋ, ತದ್ವಿಷಯಕವಾದ ಘನತೆಯನ್ನು ಸ್ವೀಕರಿಸುವುದೆಂದರೆ, ನನ್ನ ಜೀವದ ಮೇಲೆಯೇ ಬರುತ್ತದೆ. ತಾವು ಇನ್ನು ಮುಂದೆ ಮಹಾರಾಷ್ಟ್ರದ ಸೇವೆಯಲ್ಲಿಯೇ ಆಯುಷ್ಯವನ್ನು ವೆಚ್ಚಮಾಡಬೇಕೆಂದು ನಿಶ್ಚಯಿಸಿದ್ದೀರೆಂಬ ವರ್ತಮಾನವನ್ನು ಕೇಳಿ ನಮಗೆ ಅತ್ಯಂತಸಂತೋಷವಾಗಿದೆ." "ಮಾತೃಶ್ರೀಯವರು ಹೇಗೆ ಇದ್ದಾರೆ?" ಬಜಾಜಿಯು ಪ್ರಶ್ನಮಾಡಿದನು.

"ತಾವು ಇರುವುದರೊಳಗಾಗಿಯೇ ಮಹಾರಾಷ್ಟ್ರವು ಸ್ವತಂತ್ರವಾಗದಿದ್ದರೆ, ಮುಂದೆ ಅದನ್ನು ಯಾರು ರಕ್ಷಣಮಾಡುವರೆಂಬುದಾಗಿ ಮಾತೃಶ್ರೀಗಳವರಿಗೆ ಬಹಳ ಚಿಂತೆಯು ಉತ್ಪನ್ನವಾಗಿದೆ. ಅಲ್ಪಾವಧಿಯಲ್ಲಿಯೇ ನೀವು ಮತ್ತೆ ನಮಗೆ ಬೀಗರೆನಿಸುವ ಸುಯೋಗವು ಬರಬಹುದೆಂದು ತೋರುತ್ತದೆ !" ಶಿವಾಜಿಯು ಪ್ರೇಮಭರದಿಂದ ಮಾತನಾಡಿದನು.—

"ಮಾತೃಶ್ರೀಗಳು ವೀರಮಾತೆಯರೆಂಬುದರಲ್ಲಿ ಸಂದೇಹವೇ ಇಲ್ಲ. ಉಜ್ವಲದೇಶಾಭಿಮಾನಿಯೂ, ಅಪ್ರತಿಮಧೈರ್ಯಶಾಲಿಯೂ, ಧರ್ಮರಕ್ಷಣೆಗಾಗಿ ಪ್ರಾಣತ್ಯಾಗವನ್ನು ಕೂಡ ಲೆಕ್ಕಿಸದಿರುವಷ್ಟು ಧರ್ಮಜಾಗೃತಿಯುಳ್ಳವನೂ ಆದ ವೀರನೇ ಅಂತಹರ ಹೊಟ್ಟೆಯಲ್ಲಿ ಜನ್ಮ ತಾಳುವನು !"

ಶಿವಾಜಿಯು "ತಥಾಸ್ತು" ಎಂದನು. "**ಈ ಭಾರತೋದ್ಧಾರಕ್ಕೆ ಇಂತಹ ವೀರಪುರುಷರೇ ಬೇಕಾಗಿದ್ದಾರೆ !**" ಎಂಬ ಉದ್ಗಾರವು ಬಜಾಜಿಯ ಬಾಯಿಂದ ಹೊರಟಿತು !

---

# ಹನ್ನೆರಡನೆಯ ಪ್ರಕರಣ



## ಬುದ್ಧಿ-ಸಂಘಟನ !



ವಾಜಿಯೂ ಬಜಾಜಿಖಾನನೂ ಪುಣೆಗೆ ಬಂದರು. ಶಿವಾಜಿಗೆ ವಿಜಯವು ಪ್ರಾಪ್ತವಾದ ಸಂಗತಿಯು ಈ ಮೊದಲೇ ಜಿಜಾಬಾಯಿಗೆ ಗೊತ್ತಾಗಿತ್ತು. ಮಗನು ಮುತ್ತಿಗೆಯಲ್ಲಿ ಯಶಸ್ವಿಯಾದುದಲ್ಲದೆ ಬಜಾಜಿಯನ್ನು ತನ್ನ ಪಕ್ಷಕ್ಕೆ ಒಲಿಸಿಕೊಂಡ ಸಂಗತಿಯನ್ನು ಕೇಳಿ ಜಿಜಾಬಾಯಿಗೆ ಅತ್ಯಂತ ಕೌತುಕವಾಯಿತು. ಈ ಆನಂದದ ಸುದ್ದಿಯನ್ನು ಜಿಜಾಬಾಯಿಗೆ ತಿಳಿಸುವುದಕ್ಕಾಗಿ ತಾನಾಜಿಯೂ ಮಹಾದಾಜಿಯೂ ಮುಂದೆ ಹೋಗಿದ್ದರು. ಈ ಸುದ್ದಿಯನ್ನು ಕೇಳಿ ಜಿಜಾಬಾಯಿಗಂತೂ ಹರುಷವಾಗೇ ಆಯಿತು; ಮಹಾರಾಣಿಯಾದ ಸಯೀಬಾಯಿಗೂ ಇದರಿಂದ ಅತ್ಯಂತಾನಂದವಾಯಿತು. ಯಾಕೆಂದರೆ ಆಕೆಯ ಹಿರಿಯ ಅಣ್ಣನಾದ ಬಜಾಜಿಯು ಮುಸಲ್ಮಾನನಾದುದರಿಂದ, ಪಾಪ ! ಆ ಬಡವಿಯ ತೌರಮನೆಯು ಮುಳುಗಿ ಹೋಗಿತ್ತು. ತೌರಮನೆಯು ಇದ್ದರೂ ಅವಳ ಪಾಲಿಗೆ ಇಲ್ಲದಂತಾಗಿತ್ತು. ಪರಮೇಶ್ವರನ ಅವತಾರವಾದ ಶಿವಾಜಿಮಹಾರಾಜನ ಪತ್ನಿಯು, ಧರ್ಮಭ್ರಷ್ಟನೂ ಪತಿತನೂ ಕುಲಗೇಡಿಯೂ ಆದ ಒಬ್ಬ ಮುಸಲ್ಮಾನನ ತಂಗಿಯೆಂಬ ಜನಾಪವಾದವು ಕಿವಿಗೆ ಬಿದ್ದುದರಿಂದ ಆ ಬಡವಿಯು ಅರ್ಧಮರ್ಧಸತ್ತಂತೆಯೇ ಆಗಿದ್ದಳು. ತನ್ನ ಅಣ್ಣನ ಹೇಡಿತನದಿಂದ ತನ್ನ ಪರಮಪೂಜ್ಯನಾದ ಪತಿದೇವನ ಮೇಲೆ ಬಂದ ಅಪವಾದಕ್ಕಾಗಿಯೂ, ಆತನ ಶುಭ್ರವಾದ ಯಶಸ್ಸಿಗೆ ಕಲಂಕವು ಹತ್ತಿದುದಕ್ಕಾಗಿಯೂ ಅವಳಿಗೆ ಅತ್ಯಂತದುಃಖವಾಗುತ್ತಿತ್ತು. ಈ ವಿಚಾರಗಳಿಂದ ಆ ಪತಿವ್ರತೆಯ ಹೃದಯದಲ್ಲಿ ಅತ್ಯಂತ ವೇದನೆಯಾಗುತ್ತಿತ್ತು. ಆದರೆ ಇಂದು ಅವಳ ಮುಖವು ಉಜ್ವಲವಾಯಿತು. ಮುಳುಗಿ ಹೋದ ತೌರಮನೆಯು ಅವಳಿಗೆ ದೊರೆಯಿತು. ಅವಳ ಅಣ್ಣನು ಮುಸಲ್ಮಾನರ ಪಕ್ಷವನ್ನು ಬಿಟ್ಟು ಮರಾಟರ ಪಕ್ಷವನ್ನು ಸ್ವೀಕರಿಸಿದನು; ಇಷ್ಟೇ ಅಲ್ಲ; ಪಶ್ಚಾತ್ತಾಪದಿಂದ ದಗ್ಧನಾಗಿ ಮುಂದಿನ ಆಯುಷ್ಯವನ್ನೆಲ್ಲ ಮಹಾರಾಷ್ಟ್ರದ ಸೇವೆಯಲ್ಲಿ ಕಳೆಯುವಂತೆ ಪ್ರತಿಜ್ಞೆಯನ್ನು ಮಾಡಿದನು; ಪತಿತನಾದ ನನ್ನನ್ನು ಉದ್ಧಾರ ಮಾಡಿರೆಂದು ಹಿಂದೂಧರ್ಮದ ಉದ್ಧಾರಕರನ್ನು ಮರೆಹೊಕ್ಕನು. ಅಂದ ಮೇಲೆ ಅವಳಿಗೆ ಆನಂದವಾಗದೆ ಏನು !

ಸಯೀಬಾಯಿಯು ತನ್ನ ಅಣ್ಣನ ಮಗನಾದ ಮಹಾದಾಜಿಯ ಚಾತುರ್ಯ ವನ್ನು ಹೊಗಳಿದಳು. ಇಂದಿನ ವರೆಗೆ ಜಾತಿಭ್ರಷ್ಟನ ಮಗನೆಂಬ ಕಾರಣದಿಂದ ಆತನನ್ನು ಅವಳು ತನ್ನ ಹತ್ತರ ಕರೆದಿದ್ದಿಲ್ಲ. ಜಿಜಾಬಾಯಿಯು ನಿಂಬಾಳಕರರ ಮೇಲೆ ಪ್ರೀತಿಮಾಡುತ್ತಿದ್ದಳು; ಶಿವಾಜಿಯಾದರೂ ಅವರ ವಿಷಯವಾಗಿ ಸಹಾನುಭೂತಿಯುಳ್ಳವನಾಗಿದ್ದನು; ತನ್ನ ಅಣ್ಣನ ಮಗನಿಗೆ ಸಾಹಾಯ್ಯಮಾಡಬೇಕೆಂದು ಸಯೀಬಾಯಿಗಾದರೂ ಉತ್ಸುಕತೆಯಿತ್ತು. ಆದರೂ ಲೋಕಾಪವಾದದ ಹೆದರಿಕೆಯಿಂದ ಅವರು, ಬಜಾಜಿಯು ತಮ್ಮವನೆಂದು ಬಹಿರಂಗವಾಗಿ ನುಡಿಯುವಂತಿದ್ದಿಲ್ಲ. ಅವರೆಲ್ಲರೂ ನಿಂಬಾಳಕರನನ್ನು ಮೇಲಿಂದ ಮೇಲೆ ಪರಾಮರ್ಶಿಸುತ್ತಿದ್ದರು. ಆದರೆ—ಆದರೇನು ? ಆ ಪರಾಮರ್ಶದಲ್ಲಿ ಒಂದು 'ಆದರೆ' ಇತ್ತು! ಆ ಪರಾಮರ್ಶನದಲ್ಲಿ ಪ್ರೇಮವಿತ್ತು; ಆದರೆ ಅದು ಗುಪ್ತವಾಗಿತ್ತು ಆ ಸಂಬಂಧದಲ್ಲಿ ಮಮತ್ವವಿತ್ತು; ಆದರೆ ಅದು ಅವ್ಯಕ್ತವಾಗಿತ್ತು; ಆ ಬಾಂಧವದಲ್ಲಿ ಅಂತಃಕರಣವಿತ್ತು; ಆದರೆ ಅದು ಅಸ್ಫುಟವಾಗಿತ್ತು. ಆದರೆ ಈಗ ಬಹಿರಂಗವಾಗಿಯೂ ಸ್ಪಷ್ಟವಾಗಿಯೂ ನಿಂಬಾಳಕರನು ನಮ್ಮವನೆಂದು ಹೇಳುವ ಹೊತ್ತು ಬಂದಿತ್ತು. ಆದುದರಿಂದ ಸಯೀಬಾಯಿಯ ಮನಸ್ಸು ಪ್ರಫುಲ್ಲವಾಗಿತ್ತು.

ಮಹಾದಾಜಿಯ ಸ್ತ್ರೀವೇಷದಿಂದ ಜನರೆಲ್ಲರೂ ಹೇಗೆ ಮೋಸಹೋದರು ? ಖಾನನೂ ಆತನ ಸೈನಿಕರೂ ಅವರನ್ನು ನೋಡಿ ಹೇಗೆ ಮೋಹಿತರಾದರು ? ಪ್ರತಿಕೂಲಪರಿಸ್ಥಿತಿಗೆ ಧೈರ್ಯದಿಂದ ಎದೆಗೊಟ್ಟು ಮಹಾದಾಜಿಯು ತನ್ನ ತಂದೆಯ ಮನಸ್ಸನ್ನು ಹೇಗೆ ತಿರುಗಿಸಿದನು ? ಈ ಸಂಗತಿಗಳನ್ನು ತಾನಾಜಿಯು ಜಿಜಾಬಾಯಿಯ ಮುಂದೆ ಬಣ್ಣಿಸಿ ಹೇಳುತ್ತಿದ್ದನು ಮಹಾದಾಜಿಯು ನಾಚಿಕೆಯಿಂದ ಮುಖವನ್ನು ತಗ್ಗಿಸಿದನು. ಆದರೆ ಸಯೀಬಾಯಿಗೆ ಇದನ್ನೆಲ್ಲ ಕೇಳಿ ಬಹಳ ಕೌತುಕವಾಯಿತು. ಜಿಜಾಬಾಯಿಯು ಮಹಾದಾಜಿಯನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು ಪ್ರೇಮದಿಂದ ಬೆನ್ನನ್ನು ತಡವರಿಸುತ್ತಿದ್ದಳು. ಸಯೀಬಾಯಿಯೂ ಆತನನ್ನು ಪ್ರೇಮದಿಂದ ಮುದ್ದಿಸಿದಳು. ಆತನ ಮೇಲೆ ಎಲ್ಲರೂ ಬಹಳ ಪ್ರೀತಿ ಮಾಡಿದರು. ಶಿವಾಜಿಯೂ ಬಜಾಜಿಯೂ ಬಂದೊಡನೆಯೇ ಸಯೀಬಾಯಿಯು ಪಂಚಾರತಿಯನ್ನು ಬೆಳಗಿದಳು. ಒಬ್ಬನು ಪತಿಯು; ಇನ್ನೊಬ್ಬನು ಅಣ್ಣನು ! ಒಬ್ಬನು ದೇವರಂತೆ ಶಾಂತನು; ಇನ್ನೊಬ್ಬನು ತನ್ನ ಪತಿತವರ್ತನದಿಂದ ಲಜ್ಜಿತನಾದವನು ! ತನ್ನ ಪತಿತವರ್ತನಕ್ಕಾಗಿ ತಂಗಿಯು ತನ್ನನ್ನು ತಿರಸ್ಕರಿಸುವಳೋ

ಏನೋ ಎಂಬ ಕಲ್ಪನೆಯಿಂದ ಕ್ಷುಬ್ಧನಾದ ಬಜಾಜಿಯು ಸಯಿಾಬಾಯಿಯ ಕಟಾಕ್ಷದಿಂದ ಶಾಂತನಾದನು. ಆ ಅಣ್ಣತಂಗಿಯರು ಪರಸ್ಪರರನ್ನು ನೋಡಿದೊಡನೆಯೇ ಹದಿನೈದು ವರುಷಗಳ ಹಿಂದಿನ ಸುಖದುಃಖದ ಪ್ರಸಂಗಗಳು ಅವರಿಬ್ಬರಿಗೂ ನೆನಪಾದವು. ಸಯಿಾಬಾಯಿಯ ಪ್ರೇಮಮಯಮುಖವನ್ನು ನೋಡಿದೊಡನೆಯೇ ಬಜಾಜಿಗೆ ಹೇಳಕೂಡದಷ್ಟು ಆನಂದವಾಯಿತು. ತನ್ನ ತಂಗಿಯು ಶಿವಾಜಿ ಮಹಾರಾಜನಿಗೆ ಶೋಭಿಸುವಂತೆಯೇ ಶಾಂತೆಯೂ ಉದಾರಸ್ವಭಾವದವಳೂ ಆಗಿದ್ದಾಳೆಂದು ಅವನಿಗೆ ಮನವರಿಕೆಯಾಯಿತು.

ಪಂಚಾರತಿಯು ಮುಗಿದ ಕೂಡಲೇ ಶಿವಾಜಿಯೂ ಬಜಾಜಿಯೂ ಜಿಜಾಬಾಯಿಗೆ ನಮಸ್ಕರಿಸಿದರು. ಹಿಂದುಸ್ಥಾನದ ಸ್ವರಾಜ್ಯಸಂಸ್ಥಾಪಕನನ್ನು ಹಡೆದ ವೀರಮಾತೆಯ ಯೋಗ್ಯತೆಯನ್ನೆಷ್ಟು ಬಣ್ಣಿಸಬೇಕು ? ಬಜಾಜಿಯು ಅತ್ಯಂತ ನಮ್ರಭಾವದಿಂದ ಜಿಜಾಬಾಯಿಯನ್ನು ವಂದಿಸಿ ಮೊಗವನ್ನು ತಗ್ಗಿಸಿ ನಿಂತುಕೊಂಡನು. ಜಿಜಾಬಾಯಿಯ ತೇಜಸ್ಸು ಅತ್ಯಂತಪ್ರಖರವಾಗಿತ್ತು. ಯಾವ ಮನುಷ್ಯನು ಆಕೆಯ ಮುಂದೆ ಬಂದರೂ ಸ್ವತ್ವವನ್ನು ಮರೆತು ನಮ್ರನಾಗುತ್ತಿದ್ದನು.

**ಜಿಜಾಬಾಯಿ:**—ಬಜಾಜೀ, ಕುಳಿತುಕೊಳ್ಳಿರಿ. ಸಂಕೋಚಪಡುವ ಕಾರಣವಿಲ್ಲ; ನೀವು ನನಗೆ ಪರಕೀಯರಲ್ಲ; ನನಗೆ ಶಿವಾಜಿಯು ಹೇಗೋ ಹಾಗೆ ನೀವು!

ಈ ವಾಕ್ಯವನ್ನು ಕೇಳಿದೊಡನೆಯೇ ಬಜಾಜಿಯ ಕಂಠವು ಸದ್ಗದಿತವಾಯಿತು. ರುದ್ಧಕಂಠದಿಂದ ಆತನು ಮಾತನಾಡಿದನು—“ಮಾತ್ಯಗಳೇ, ಇದು ತಮ್ಮ ಔದಾರ್ಯವು. ಇಂದ್ರನ ಐರಾವತಕ್ಕೂ ಶ್ಯಾಮಭಟ್ಟರ ತಟ್ಟುವಿಗೂ ಎಲ್ಲಿಯ ಸಾಮ್ಯ ! ತನ್ನ ವೀರ್ಯದಿಂದ ಮಹಾರಾಷ್ಟ್ರವನ್ನು ಮುಸಲ್ಮಾನರ ಅತ್ಯಾಚಾರದಿಂದ ತಪ್ಪಿಸಿ ಸ್ವತಂತ್ರಗೊಳಿಸಲು ಯತ್ನಿಸುತ್ತಿರುವ ಶಿವಾಜಿಗೂ, ಯಃಕಶ್ಚಿತವಾದ ಧನಲಾಭಕ್ಕಾಗಿ ತನ್ನ ಪೂಜ್ಯವಾದ ಧರ್ಮದಿಂದ ಪರಾವೃತ್ತನಾದ ಮಹಾಪಾಪಿಯಾದ ಈ ಯವನನಿಗೂ ಎಲ್ಲಿಯ ಹೋಲಿಕೆ !! ತಮ್ಮ ವೀರಪುತ್ರನು ಇಡೀರಾಷ್ಟ್ರದ ಸಂಸಾರವನ್ನು ನಿರ್ವಿಘ್ನವಾಗಿ ಸಾಗಿಸುವ ಭಾರವನ್ನು ಹೊತ್ತುಕೊಂಡಿದ್ದಾನೆ; ಆದರೆ ಮೂರ್ಖನಾದ ಈ ಬಜಾಜಿಯು ಒಬ್ಬ ಪಾಪಿಷ್ಠೆಯ ಮೋಹಜಾಲದಲ್ಲಿ ಸಿಲುಕಿ ಸ್ವಂತ ಹೆಂಡಿರುಮಕ್ಕಳನ್ನು ಕೂಡ ಮರೆತುಬಿಟ್ಟಿದ್ದಾನೆ ! ”

ಬಜಾಜಿಯ ಕಣ್ಣೊಳಗಿಂದ ಒಂದೇ ಸಮನೆ ಅಶ್ರುಗಳು ಸುರಿಯುತ್ತಿದ್ದುವು. ಇದನ್ನು ನೋಡಿ ಜಿಜಾಬಾಯಿಯು ಮಾತನಾಡಿದಳು:—ಬಜಾಜೀ,

ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು ? ಹಿಂದೂಧರ್ಮದ ವಿಷಯದಲ್ಲಿ ನಿಮ್ಮಲ್ಲಿದ್ದ ಪ್ರೇಮವು ಇನ್ನೂ ಲುಪ್ತವಾಗಿಲ್ಲ; ಆದುದರಿಂದ ಈಗಲಾದರೂ ನಿಮಗೆ ಸುಬುದ್ಧಿಯು ಹುಟ್ಟಿತು. ನಿಮ್ಮ ತಂಗಿಯ ಹೊಟ್ಟೆಯಿಂದ ಭೋಸಲೆ ಮನೆತನದ ಕುಲದೀಪಕನು ಜನ್ಮಿಸತಕ್ಕವನಿದ್ದಾನೆ. ಆತನು ಹಿಂದೂಧರ್ಮದ ಮೇಲೆ ಅತ್ಯಂತನಿಷ್ಠೆಯುಳ್ಳವನಾಗುವನು. ಯಾಕಂದರೆ, ಆತನು ಹುಟ್ಟುವ ಪೂರ್ವದಲ್ಲಿಯೇ ಮಾತೃವಂಶವು ಪಿತೃವಂಶದಂತೆ ಧರ್ಮಪರಾಯಣವಾಗುತ್ತಲಿದೆ. ನೀವು ಸಯಿಬಾಯಿಯ ಅಣ್ಣಂದಿರಲ್ಲವೇ ? ಆದುದರಿಂದ ನೀವು ನನಗೆ ಪರಕೀಯರಲ್ಲ; ನೀವೂ ಶಿವಬಾನೂ ಕೂಡಿಯೇ ಯುದ್ಧ ಮಾಡಿದರೆ ಹಾ ಹಾ ಅನ್ನುವದರೊಳಗಾಗಿ ಮಹಾರಾಷ್ಟ್ರವು ಸ್ವತಂತ್ರವಾಗುವದು ! ಮತ್ತು ಹಿಂದೂ ಧರ್ಮದ ಸ್ವರೂಪವು ಉಜ್ವಲವಾಗುವದು ! ಈಗ ನಡೆದಿರುವ ಧರ್ಮಚ್ಛಲವೂ, ಗೋಬ್ರಾಹ್ಮಣರ ಕೊಲೆಯೂ ನಿಂತುಹೋಗಿ ಮಹಾರಾಷ್ಟ್ರದ ದಾಸ್ಯವು ಮುಗಿದು ಹೋಗಬೇಕೆಂದು ಪ್ರಭುವಿನ ಅಪೇಕ್ಷೆಯೇ ಇದೆ ! ಆದುದರಿಂದಲೇ ಆ ಪ್ರಭುವು ಸತ್ಪಕ್ಷವನ್ನು ಸೇರಬೇಕೆಂಬ ಬುದ್ಧಿಯನ್ನು ನಿಮಗೆ ಕೊಟ್ಟನು. ನಿಮ್ಮನ್ನು ಪ್ರಭುವೇ ನಮ್ಮೊಳಗೆ ತಂದುಬಿಟ್ಟನು ! ಬಜಾಜೀ, ಈ ಕಾರ್ಯವು ನಿಮ್ಮಂತಹರ ಧೈರ್ಯವನ್ನೇ ಅವಲಂಬಿಸಿದೆ. ಶಿವಬಾನು ನಿಮಿತ್ತಮಾತ್ರವಾಗಿದ್ದಾನೆ ! ”

ಬಜಾಜಿಯು ಗದ್ಗದಿತನಾಗಿ ಮಾತಾಡಿದನು. “ ಮಾತೃಶ್ರೀಗಳೇ, ನಾನು ಪತಿತನು; ನಾನು ತಮಗೆ ಶರಣು ಬಂದಿದ್ದೇನೆ. ನನ್ನನ್ನು ಉದ್ಧಾರಮಾಡಿರಿ. ನರಕದ ಹಾದಿಯಿಂದ ತಿರುಗಿಸಿ ನನ್ನನ್ನು ತಮ್ಮೊಳಗೆ ಕರೆದುಕೊಳ್ಳಿರಿ. ತಾವು ಪರಮೇಶ್ವರನ ಅವತಾರವಾಗಿದ್ದೀರಿ. ”

ಜಿಜಾಬಾಯಿಯು ಬಜಾಜಿಯನ್ನು ಸಮಾಧಾನಗೊಳಿಸುತ್ತ ಮಾತನಾಡಿದಳು:—ನಾವೂ ನೀವೂ ಒಂದೇ ! ಈ ಭರತವರ್ಷದ ಸ್ವಾತಂತ್ರ್ಯಕ್ಕೋಸ್ಕರ ನಮ್ಮ ಜೀವವು ತಳಮಳಿಸುತ್ತಿದೆ. ಹಿಂದೂ ಧರ್ಮದ ವಿಜಯಕ್ಕೋಸ್ಕರವಾಗಿ ನಮ್ಮ ಹೃದಯವು ಹೆಣಗಾಡುತ್ತಲಿದೆ. ನಿಮ್ಮಲ್ಲಿಯೂ ಇದೇ ಭಾವನೆಯು ಉತ್ಪನ್ನವಾಗಿದ್ದರೆ ನಾವೂ ನೀವೂ ಒಂದೇ ! ಪತಿತನಾರು, ಪಾವನನಾರು ? ಭಾರತಮಾತೆಯು ಸ್ವತಂತ್ರಳಾಗಬೇಕೆಂದು ಯಾವನು ಇಚ್ಛಿಸುವನೋ, ಮತ್ತು ಅದಕ್ಕೋಸ್ಕರವಾಗಿಯೇ ಯಾವನು ತನ್ನ ಪ್ರಾಣವನ್ನು ಕೂಡ ಕಳೆದುಕೊಳ್ಳಲು ಸಿದ್ಧನಾಗುವನೋ ಅವನೇ ನಿಜವಾದ ಪಾವನನು ! ಅಂತಹನು ಶಿವಾಜಿಯ ಆಶ್ರ-

ಯದಲ್ಲಿದ್ದರೂ ಸರಿ, ಇಲ್ಲದಿದ್ದರೂ ಸರಿ !! ಹಿಂದೂಧರ್ಮವು ಮೊದಲಿನಂತೆಯೇ ಉಜ್ವಲವಾಗಲೆಂದೂ ಜಗತ್ತಿನಲ್ಲೆಲ್ಲ ಅದರ ಜಯಭೇರಿಯು ನಿನಾದಿತವಾಗಲೆಂದೂ ಯಾವನು ಮನಃಪೂರ್ವಕವಾಗಿ ಇಚ್ಛಿಸುತ್ತಾನೋ, ಮತ್ತು ಆ ಕೆಲಸಕ್ಕೋಸ್ಕರ ಯಾವನು ತನ್ನ ತನುಮನೋಧನಗಳನ್ನು ಸಮರ್ಪಿಸುತ್ತಾನೋ ಅವನೇ ಹಿಂದೂವು! ಅಂತಹನ ತಲೆಯಲ್ಲಿ ಶಿಖೆಯಿದ್ದರೂ ಸರಿಯೇ, ಇಲ್ಲದಿದ್ದರೂ ಸರಿಯೇ! ನಿಮ್ಮಲ್ಲಿಯೂ ಇದೇ ಪ್ರಕಾರದ ಭಾವನೆಗಳಿದ್ದರೆ ನೀವೂ ಹಿಂದುಗಳೇ; ನೀವೂ ಪಾವನರೇ! ಆ ಮೇಲೆ ನಿಮಗೆ ಪತಿತರೆಂದು ಯಾರು ಅನ್ನುವರು? ನಾವು ಇದೇ ದೇಶದಲ್ಲಿಯೇ ಹುಟ್ಟಿದೆವು; ನಮ್ಮ ಪೂರ್ವಜರೂ ಇಲ್ಲಿಯವರೇ; ನಾವು ಒಂದೇ ವಿಧದ ಕಥೆಗಳನ್ನು ಕೇಳಿದ್ದೇವೆ; ಆ ರಾಮಕೃಷ್ಣರನ್ನೇ ನಾವು ದೊಡ್ಡವರೆಂದು ತಿಳಿಯುತ್ತ ಬಂದಿದ್ದೇವೆ; ಅಂತ ಮೇಲೆ ನಾವು ಒಂದೇ ಅಲ್ಲವೇ? ಬಜಾಜೀ, ಈ ಹಿಂದುಸ್ಥಾನವು ನಿಮ್ಮದೆಂದು ತಿಳಿಯುತ್ತೀರೋ ಇಲ್ಲವೋ? ಹಿಂದೂಧರ್ಮವೇ ನಿಜವಾದ ಧರ್ಮವೆಂದು ನಿಮ್ಮ ಭಾವನೆಯಿದೆಯೋ ಇಲ್ಲವೋ? ನಿಮ್ಮ ದೇಶಕ್ಕಾಗಿಯೂ ನಿಮ್ಮ ಧರ್ಮಕ್ಕಾಗಿಯೂ ಬೇಕಾದ ರೀತಿಯಿಂದ ಸ್ವಾರ್ಥತ್ಯಾಗಮಾಡಲು ನೀವು ಸಿದ್ಧರಿರುವಿರೋ ಇಲ್ಲವೋ?"

ಬಜಾಜಿಯು ಜಿಜಾಬಾಯಿಯ ಪಾದಗಳ ಮೇಲೆ ಕಯ್ಯನ್ನಿಟ್ಟು ಮಾತನಾಡಿದನು:–"ಮಾತೃಶ್ರೀಗಳೇ, ತಾವು ಈ ದಾಸನನ್ನು ಬೇಕಾದ ರೀತಿಯಿಂದ ಪರೀಕ್ಷಿಸಿರಿ. ದೇಶಕಾರ್ಯಕ್ಕಾಗಿಯೂ ಧರ್ಮಕಾರ್ಯಕ್ಕೋಸ್ಕರವಾಗಿಯೂ ತಾವು ಹೇಳಿದ ರೀತಿಯಿಂದ ದೇಹವನ್ನು ಸವಿಸಲು ನಾನು ಸಿದ್ಧನಿದ್ದೇನೆ." ಜಿಜಾಬಾಯಿಯು ಬಜಾಜಿಯ ಮೈ ಮೇಲೆ ಕಯ್ಯಾಡಿಸುತ್ತ ಅವನ ಪ್ರಶಂಸೆಯನ್ನು ಮಾಡಿದಳು; ಮತ್ತು ಶಿವಾಜಿಯ ಕಡೆಗೆ ತಿರುಗಿ ಹೀಗೆ ಹೇಳಿದಳು. "ಶಿವಬಾ, ಬಜಾಜಿಯು ನಿಜವಾದ ಹಿಂದುವೂ. ನಿಜವಾದ ಮರಾಟನೂ ಆಗಿದ್ದಾನೆಂದು ಮಹಾರಾಷ್ಟ್ರಕ್ಕೆಲ್ಲ ಸಾರಿ ಹೇಳು"

ಆದರೆ ಈ ಕೆಲಸವು ಬಹಳ ಕಠಿನವಾಗಿತ್ತು. ಶಿವಾಜಿಯು ಮನೆಯವರೆಲ್ಲರೂ ಬಜಾಜಿಯು ಹಿಂದುವೇ ಆಗಿದ್ದಾನೆಂದು ಅಭಿಪ್ರಾಯಪಟ್ಟರು. ಶಿವಾಜಿಯ ಮಿತ್ರರೂ, ವಿದ್ವಾಂಸರೂ ನಿಸ್ಪೃಹಿಗಳೂ ಆದ ಅನೇಕಹಿಂದುಗಳೂ '**ಧರ್ಮಕ್ಕಾಗಿ ಸರ್ವಸ್ವವನ್ನೂ ಪರಿತ್ಯಜಿಸಲು ಸಿದ್ಧನಾದವನು ಹಿಂದುವೇ.**" ಎಂದು ಸ್ಪಷ್ಟವಾಗಿ ಹೇಳಿದರು. ಆದರೆ ಪ್ರತಿಯೊಂದು ದೇಶದಲ್ಲಿಯೂ ಪ್ರತಿಯೊಂದು ಸಮಾಜದಲ್ಲಿಯೂ ದಾಂಭಿಕರು ತುಂಬಿಕೊಂಡಿರುವ

ರಷ್ಟೇ; ಅವರಿಗೆ ಈ ವಿಚಾರವು ಸಮ್ಮತವಾಗಲಿಲ್ಲ. ರಾಜನು ಧರ್ಮದ ವಿಷಯದಲ್ಲಿ ತಿಲಮಾತ್ರವೂ ಕಯ್‌ಹಾಕತಕ್ಕುದಲ್ಲವೆಂದು ಅವರು ಅನ್ನಲಾರಂಭಿಸಿದರು. ಬಜಾಜಿಯು ಒಮ್ಮೆ ಕುಲಗೆಟ್ಟಿದ್ದಾನೆ; ಹಂಡಮೇಲೆ ತೀರಿಹೋಯಿತು; ಅವನು ಮತ್ತೆ ಎಂದೂ ಹಿಂದುವಾಗಲಾರನು. ಆದುದರಿಂದ ಹಿಂದೂಧರ್ಮಕ್ಕಾಗಿ ಪ್ರಾಣಕೊಟ್ಟರೂ ಆತನು ಜಾತಿಭ್ರಷ್ಟನೇ! ಅಪವಿತ್ರನೇ! ಎಂದು ಈ ಶಿಷ್ಯರು ಅನ್ನಲಾರಂಭಿಸಿದರು. ಬಜಾಜಿಯನ್ನು ಹಿಂದೂವನ್ನಾಗಿ ಮಾಡಿಕೊಳ್ಳಬೇಕೆಂಬ ಹಟವು ಶಿವಾಜಿಗೆ ತಕ್ಕುದಲ್ಲವೆಂದು ಇವರು ಮಾತಾಡುತ್ತಿದ್ದರು. ಹಿಂದೂ ಧರ್ಮದ ಉದ್ಧಾರ, ಹಿಂದುಸ್ಥಾನದ ಸ್ವರಾಜ್ಯಸ್ಥಾಪನೆ ಎಂಬ ಈ ಅದ್ಭುತವಾದ ಉದ್ದೇಶಗಳನ್ನು ಮುಂದೆ ಮಾಡಿ ಶಿವಾಜಿಯು ಧರ್ಮವನ್ನು ಕೆಡಿಸುತ್ತಿರುವನೆಂದು ಈ ಬಕಧ್ಯಾನಿಗಳು ಜನರಿಗೆ ಉಪದೇಶಮಾಡತೊಡಗಿದರು. ಕೃಷ್ಣಾಜೀಪಂತ ಮತ್ತು ಶಿವರಾಮ ಮಹಾದೇವ ಎಂಬ ಇಬ್ಬರು ದಾಂಭಿಕಬ್ರಾಹ್ಮಣರು ಈ ಅಭಿಮಾನಿಗಳ ಮುಂದಾಳುತನವನ್ನು ವಹಿಸಿದರು. ಇವರ ಪ್ರತಾಪದಿಂದ ಭಾವಿಕಜನರ ಮನಸ್ಸುಗಳು ಚಂಚಲವಾದುವು. "ಶಿವಾಜಿಯ ಪಕ್ಷವನ್ನು ಬಿಟ್ಟು ಬಿಡಿರಿ; ಯಾಕಂದರೆ, ಅವನು ಧರ್ಮವನ್ನು ಕೆಡಿಸಲಾರಂಭಿಸಿರುವನು." ಎಂದು ಇವರು ಬೊಗಳಲಾರಂಭಿಸಿದರು.

ಶಿವಾಜಿಗೂ ಜಿಜಾಬಾಯಿಗೂ ಮಹಾಸಂಕಟವು ಪ್ರಾಪ್ತವಾಯಿತು. ಹಿಂದುಸ್ಥಾನದ ಮೇಲೆ ಈ ಸಂಕಟದಿಂದ ದುಷ್ಪರಿಣಾಮವಾಗುವದೋ ಏನೋ ಎಂಬ ಭೀತಿಯು ಅವರಲ್ಲಿ ಉತ್ಪನ್ನವಾಯಿತು. ಯಾಕಂದರೆ ಜನಸಮಾಜದ ಮನಃಪ್ರಭಾವವು ಒಮ್ಮೆ ತಿರುಗಿಬಿಟ್ಟರೆ ಸ್ವರಾಜ್ಯವೃಕ್ಷದ ಬೇರು ಒಣಗಿ ಹೋಗುವುದೆಂಬುದು ಅವರಿಗೆ ಗೊತ್ತಿತ್ತು. ಆದರೆ ಇಂತಹ ಪೊಳ್ಳು ಲೋಕಪ್ರಿಯತೆಗಾಗಿ ಅವರು ತಮ್ಮ ಮಾತನ್ನು ಮುರಿಯಲಿಲ್ಲ. ಆದುದರಿಂದಲೇ ಅವರು ಈಗಲೂ ದೈವೀಪುರುಷರೆಂದು ತಿಳಿಯಲ್ಪಡುತ್ತಾರೆ.

ಕೃಷ್ಣಾಜೀಪಂತನೂ ಶಿವರಾಮ ಮಹಾದೇವನೂ ಹಿಂದು ಮುಂದು ವಿಚಾರಮಾಡದೆ ತಮ್ಮ ಸ್ವಂತದ ಪ್ರತಿಷ್ಠೆಗಾಗಿ ಸ್ವರಾಜ್ಯದ ಮೇಲೆ ನಿಷ್ಕಾರಣವಾಗಿ ಗದೆಯನ್ನು ಎತ್ತಿದರು. ಜನರ ಮನಸ್ಸನ್ನು ಕಲುಷಿತವಾಗಿ ಮಾಡಿ ಲೋಕಗಂಗಾಪ್ರವಾಹವು ನಿಮ್ಮ ವಿರುದ್ಧವಾಗಿ ಹರಿಯುವಂತೆ ಮಾಡುವೆವು; ಆದುದರಿಂದ ನಿಮ್ಮ ಸ್ವರಾಜ್ಯದ ಕಲ್ಪನೆಯನ್ನು ಪೂರ್ಣವಾಗಿ ಮರೆತುಬಿಡಿರಿ; ಈ

ಪ್ರಕಾರವಾಗಿ ಆ ನೀಚರು ಶಿವಾಜಿಯನ್ನು ಕೂಡ ಬೆದರಿಸುವ ಯತ್ನ ಮಾಡತೊಡಗಿದರು. ಆದರೆ ಆ ಮಹಾರಾಷ್ಟ್ರನು ಹೀಗೆ ಉತ್ತರಕೊಟ್ಟನು. "ಮಹಾರಾಷ್ಟ್ರವು ಸ್ವತಂತ್ರವಾಗಬೇಕೆಂಬುದು ಪ್ರಭುವಿನ ಇಚ್ಛೆಯಾಗಿದೆ; ನಾನು ನಿಮಿತ್ತಮಾತ್ರವಾಗಿದ್ದೇನೆ. ನನ್ನ ದೃಷ್ಟಿಯಿಂದ ಬಜಾಜಿಯು ಹಿಂದುವಾಗಿದ್ದಾನೆ. ಯಾಕಂದರೆ ಹಿಂದೂಧರ್ಮದ ಉದ್ಧಾರಕ್ಕಾಗಿ ಆತನ ಮನಸ್ಸು ತಳಮಳಿಸುತ್ತಿದೆ. ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯವನ್ನುಂಟುಮಾಡಬೇಕೆಂಬುದೇ ಆತನಿಗೆ ನಿದಿಧ್ಯಾಸವಾಗಿದೆ. ಆದುದರಿಂದ ಆತನು ನಿಜವಾಗಿ ಹಿಂದೂ ಆಗಿದ್ದಾನೆ.

ಧರ್ಮಭ್ರಷ್ಟತನದ (!) ಈ ಉತ್ತರವನ್ನು ಕೇಳಿ ಕೃಷ್ಣಾಜೀಪಂತ ಮತ್ತು ಶಿವರಾಮ ಮಹಾದೇವ ಇವರಿಗೆ ಅತ್ಯಂತಸಂತಾಪವಾಯಿತು. ಇಂತಹ ಧರ್ಮಭ್ರಷ್ಟನಿಗೆ ಹಿಂದೂ ಧರ್ಮಸಂಸ್ಥಾಪಕನೆಂದು ಕರೆಯುವುದಕ್ಕಿಂತ ಹೋಳೀಹುಣ್ಣಿವೆಯ ದಿವಸ ಕರ್ಮಠತನದಿಂದ ಶಂಖ ಹೊಡೆಯುವ ಮತ್ತು ಶ್ರಾವಣಿಯ ದಿವಸ ಪಂಚಗವ್ಯವನ್ನು ಕುಡಿಯುವ ನಮ್ಮಂತಹ ಬ್ರಾಹ್ಮಣರನ್ನು ಜನರು ಏಕೆ ಮುಂದಾಳುಗಳನ್ನಾಗಿ ಮಾಡಿಕೊಳ್ಳಬಾರದೆಂದು ಅವರಿಗೆ ಆಶ್ಚರ್ಯವುಂಟಾಯಿತು! ಮಹಾರಾಷ್ಟ್ರದೇಶದ ಜಾಜ್ವಲ್ಯವಾದ ಅಭಿಮಾನವು ನಮ್ಮಲ್ಲಿ ಇಲ್ಲದಿದ್ದರೂ, ಮಹಾರಾಷ್ಟ್ರದ ಸ್ವಾತಂತ್ರ್ಯಕ್ಕೋಸ್ಕರ ನಾವು ಸರ್ವಸ್ವಕ್ಕೂ ತಿಲಾಂಜಲಿಯನ್ನು ಕೊಡಲು ಸಿದ್ಧರಿಲ್ಲದಿದ್ದರೂ, ದೇಶಹಿತವನ್ನು ಮುಂದೆ ಮಾಡಿಕೊಂಡು ಏನಕೇನಪ್ರಕಾರದಿಂದ ನಮ್ಮ ಗೋಪಾಳವನ್ನು ತುಂಬಿಕೊಳ್ಳದೆ ಇದ್ದರೂ, ಬಜಾಜಿಯಂತಹ ಜಾತಿಭ್ರಷ್ಟನನ್ನು ಹಿಂದೂ ಧರ್ಮದಲ್ಲಿ ತೆಗೆದುಕೊಳ್ಳುವ ಭಯಂಕರವಾದ ಭ್ರಷ್ಟಾಕಾರವನ್ನು ಮಾತ್ರ ನಿಶ್ಚಯವಾಗಿಯೂ ಮಾಡಲಾರೆವು. ಆದುದರಿಂದಲೇ ಮರಾಟರು ನಮ್ಮನ್ನು ಮುಂದಾಳುಗಳನ್ನಾಗಿ ಮಾಡಿಕೊಳ್ಳಬೇಕೆಂದು ನಮ್ಮ ಪ್ರಾಮಾಣಿಕವಾದ ಮತವಿದೆ. ಎಂದು ಅವರು ಹೇಳುತ್ತಿದ್ದರು. ಮತ್ತು ಶಿವಾಜಿಯು ಧರ್ಮವನ್ನು ಕೆಡಿಸುತ್ತಾನೆಂದು ಪ್ರಬಲವಾದ ಸಿಂಹಗರ್ಜನೆಯನ್ನು ಎಲ್ಲ ಕಡೆಯಲ್ಲಿಯೂ ಮಾಡುತ್ತಿದ್ದರು.

ಕೃಷ್ಣಾಜೀಪಂತನೂ ಶಿವರಾಮ ಮಹಾದೇವನೂ ಪ್ರಯತ್ನಪೂರ್ವಕವಾಗಿ ಒಂದು ಸಭೆಯನ್ನು ನೆರೆಯಿಸಿದರು. ಅದರಲ್ಲಿ ಅವರಿಬ್ಬರೂ ಹೇಳಿದುದೇನೆಂದರೆ—"ಎಲೈ, ಧರ್ಮನಿಷ್ಠರಾದ ಮರಾಟರೇ, ಹಿಂದೂಸ್ಥಾನದ ಸ್ವರಾಜ್ಯದ ಹೆಸರಿನಿಂದ ಶಿವಾಜಿಯು ಧರ್ಮವನ್ನು ಅತಿಶಯವಾಗಿ ಕೆಡಿಸುತ್ತಲಿದ್ದಾನೆ! ಒಮ್ಮೆ ಮುಸಲ್ಮಾನನಾದ ಮನುಷ್ಯನು ಮತ್ತೆ ನಮ್ಮ ಪರಮಶ್ರೇಷ್ಠ ಹಿಂದೂಧರ್ಮ

ದಲ್ಲಿ ಪ್ರವೇಶ ಮಾಡಬಲ್ಲನೇ? ಶಿವಾಜಿಗೆ ಇದು ತಿಳಿಯುವುದಿಲ್ಲವೆಂತಲ್ಲ; ಆದರೆ ಇದರಿಂದ ಅವನು ಸ್ವಾರ್ಥವನ್ನು ಸಾಧಿಸಿಕೊಳ್ಳಬೇಕಾಗಿದೆ. ತನ್ನ ಹೆಂಡತಿಯ ಅಣ್ಣನನ್ನು ಆತನು ಹಿಂದುವನ್ನಾಗಿ ಮಾಡಬೇಕಾಗಿದೆ. ನಿಜವಾಗಿ ವಿಚಾರ ಮಾಡಿದರೆ, ಶಿವಾಜಿಯ ಬೀಗನು ಜಾತಿಭ್ರಷ್ಟನಾದೊಡನೆಯೇ ಶಿವಾಜಿಗೂ ನಾವು ಬಹಿಷ್ಕಾರವನ್ನು ಹಾಕಬೇಕಾಗಿತ್ತು. ಆದರೆ ಅವನು ಮಹಾರಾಷ್ಟ್ರದ ಸಲುವಾಗಿ ಮಾಡುತ್ತಿದ್ದ ಅಲ್ಪ ಸ್ವಲ್ಪ ಸೇವೆಯನ್ನು ಮನಸ್ಸಿನಲ್ಲಿ ತಂದು ನಾವು ಅತ್ತ ಕಡೆಗೆ ದುರ್ಲಕ್ಷ್ಯಮಾಡಿದೆವು. ಆದರೆ ನಮ್ಮ ಔದಾರ್ಯದ ದುರುಪಯೋಗ ಮಾಡಿಕೊಂಡು ಅವನು ಈಗ ಆ ಕುಲಗೇಡಿಯಾದ ಬಜಾಜಿಯನ್ನು ಹಿಂದುವನ್ನಾಗಿ ಮಾಡಬೇಕೆಂದು ಹವಣಿಸುತ್ತಾನೆ. ಆ ಬಜಾಜಿಯು ಮುಸಲ್ಮಾನನಾಗಿದ್ದಾನಷ್ಟೇ ಅಲ್ಲ; ಒಬ್ಬ ಮುಸಲ್ಮಾನ ಹೆಂಗಸನ್ನು ಮದುವೆಯಾಗಿ ಅವಳೊಡನೆ ಕೆಲವು ದಿವಸಗಳ ವರೆಗೆ ಸಂಸಾರವನ್ನೂ ಮಾಡಿದ್ದಾನೆ. ಇದೆಲ್ಲವನ್ನು ತಿಳಿದೂ ನಾವು ಇದಕ್ಕೆ ಸುಮ್ಮನಿದ್ದರೆ ನಾವೇ ನಮ್ಮ ಧರ್ಮವನ್ನು ಹಾಳು ಮಾಡಿಕೊಂಡಂತಾಗುವದು. ಆದುದರಿಂದ ನಾವೆಲ್ಲರೂ ಕೂಡಿ ಶಿವಾಜಿಗೆ ಬಹಿಷ್ಕಾರವನ್ನು ಹಾಕೋಣ. ಮತ್ತು ಅವನ ಈ ಭ್ರಷ್ಟಾಕಾರದ ವರ್ತನವನ್ನು ತೀವ್ರವಾಗಿ ನಿಷೇಧಿಸೋಣ! ಶಿವಾಜಿಯ ಕೆಲಸಗಳಿಂದ ನೀವು ಮೋಹಿತರಾಗಬೇಡಿರಿ. ಮೊದಲು ನಮಗಾದರೂ ನಿಮ್ಮಂತೆಯೇ ಅವನ ವಿಷಯವಾಗಿ ಆದರಭಾವವಿತ್ತು; ಆದುದರಿಂದ ಅವನ ಪಕ್ಷಕ್ಕೆ ಸೇರಿದ್ದೆವು; ಆದರೆ ಅವನ ಈ ಕೃತ್ಯದಿಂದ ನಮ್ಮ ಮನಸ್ಸಿಗೆ ಅವನ ಉದ್ದೇಶವು ಚೆನ್ನಾಗಿ ಗೊತ್ತಾಯಿತು. ಇನ್ನು ಮುಂದೆ ನಾವು ಆತನ ಪಕ್ಷವನ್ನು ಬಿಟ್ಟುಬಿಡುವೆವು! ಇಂತಹ ಧರ್ಮಭ್ರಷ್ಟತನದಿಂದ ಸ್ವರಾಜ್ಯವನ್ನು ಗಳಿಸುವುದು ನಮಗೆ ಬೇಡ! ಅದಕ್ಕಿಂತಲೂ ಮುಸಲ್ಮಾನರ ಆಧಿಪತ್ಯವೇ ನಮಗೆ ಒಳಿತು! ಮುಸಲ್ಮಾನರು ಹಿಂದೂಧರ್ಮದ ಮೇಲೆ ಒತ್ತಾಯ ಮಾಡುತ್ತಿದ್ದರೂ ಅವರು ಪರಕೀಯರಾದುದರಿಂದ ಅದು ಕ್ಷಮ್ಯವೆನಿಸುವುದು; ಆದರೆ ಈ ಮರಾಟನು ಜನರೆಲ್ಲರೂ ತನ್ನನ್ನು ದೊಡ್ಡವನೆಂದು ಭಾವಿಸುತ್ತಾರೆಂದು ತಿಳಿದು, ಧರ್ಮದ ವಿಷಯದಲ್ಲಿ ಈ ತರದ ವ್ಯತ್ಯಾಸವನ್ನುಂಟುಮಾಡುವುದು ಅತ್ಯಂತಗರ್ಹಣೀಯವಾದ ಸಂಗತಿಯು! ಆದುದರಿಂದ ನಾವೆಲ್ಲರೂ ಇದನ್ನು ಸ್ಪಷ್ಟವಾಗಿಯೂ ಕಠೋರವಾಗಿಯೂ ನಿಷೇಧಿಸೋಣ; ಇಷ್ಟಾದರೂ ಶಿವಾಜಿಯು ತನ್ನ ಹಟವನ್ನು ಬಿಡದಿದ್ದರೆ ನಾವೆಲ್ಲರೂ ಒಂದಾಗಿ ಮುಸಲ್ಮಾನರನ್ನು ಕೂಡೋಣ; ಮತ್ತು ಶಿವಾಜಿಗೆ ಯೋಗ್ಯಪ್ರಾಯಶ್ಚಿತ್ತವನ್ನು ಕೊಡಿಸೋಣ!"

ಮೇಲಿನ ಭಾಷಣವು ಸಭೆಯೊಳಗಿನ ಬಹಳ ಜನರಿಗೆ ರುಚಿಸಲಿಲ್ಲ. ಆದರೆ

ಕೆಲವರು ಪ್ರತಿಷ್ಠಾಕಾಮಿಗಳಿಗೆ ಮಾತ್ರ ಈ ಇಬ್ಬರು ಬ್ರಾಹ್ಮಣರು ಒಳ್ಳೆಯ ಧರ್ಮಶೀಲರೂ ಸಮಾಜಕ್ಕೆ ನಿಜವಾದ ಮುಂದಾಳುಗಳೂ ಆಗಿರುವರೆಂದು ತೋರಿತು. ಶಿವಾಜಿಯು ಮೇರುಪರ್ವತದಂತೆ ಶಾಂತನಾಗಿದ್ದನು. ಅವನ ಹತ್ತರವೇ 'ಇದರ ಪರಿಣಾಮವು ಹೇಗಾಗುವುದೋ?' ಎಂದು ಚಿಂತಿಸುತ್ತ ಜಿಜಾಬಾಯಿಯು ಕುಳಿತುಕೊಂಡಿದ್ದಳು. ಶಿವಾಜಿಯ ಮಿತ್ರರು ಆ ಇಬ್ಬರ ಮೇಲೆಯೂ ಬಹಳ ಕೋಪಿಸಿಕೊಂಡರು; ಮತ್ತು ಇಂತಹ ಘಾತುಕರು ತಮ್ಮ ದೇಶದಲ್ಲಿ ಹುಟ್ಟಿದುದಕ್ಕಾಗಿ ವ್ಯಸನಪಟ್ಟರು. 'ಮಹಾರಾಷ್ಟ್ರವು ಸ್ವತಂತ್ರವಾಗುವ ಕಾಲವು ಇನ್ನೂ ಸಮೀಪಿಸಿದೆಯೋ ಇಲ್ಲವೋ!' ಎಂಬುದಾಗಿ ಶಿವಾಜಿಗಾದರೂ ಒಂದುಕ್ಷಣಹೊತ್ತು ಸಂಶಯವುಂಟಾಯಿತು. ಆದರೆ ಅಲ್ಪಾವಧಿಯಲ್ಲಿಯೇ ಅವನು ಅವರಿಬ್ಬರಿಗೂ ಉತ್ತರಕೊಡಲು ಸಿದ್ಧನಾದನು.

ಇಷ್ಟರಲ್ಲಿ ಕಾವಿಯು ಬಟ್ಟೆಯನ್ನು ಧರಿಸಿದ ಸುಂದರವೂ ತೇಜಸ್ವಿಯೂ ಆದ ಒಂದು ಮೂರ್ತಿಯು ಸಭೆಯನ್ನು ಪ್ರವೇಶಿಸಿತು. ಆ ಮೂರ್ತಿಯ ತೇಜಸ್ಸಿನಿಂದ ಸಭೆಯೆಲ್ಲವೂ ಪ್ರಕಾಶಿತವಾಯಿತು. ಸರ್ವರೂ ಲಕ್ಷ್ಯಗೊಟ್ಟು ಆ ಮೂರ್ತಿಯನ್ನೇ ನೋಡತೊಡಗಿದರು.



"समर्थाचिया सेवका वक्र पाहे ।
असा सर्व भूमंडळी कोण आहे ॥
जयाची लिला वर्णिती लोक तिन्ही ।
नुपेक्षी कदा रामदासाभिमानी ॥
जय जय रघुवीर समर्थ ! ॥

**ಅರ್ಥ**:—ಸಮರ್ಥರಾಮದಾಸರ ಸೇವಕರನ್ನು ಕೊಂಕುಗಣ್ಣಿನಿಂದ ನೋಡಲು ಈ ಭೂಮಂಡಲದಲ್ಲಿ ಯಾವನು ಸಮರ್ಥನಾಗುವನು ? ಮೂರುಲೋಕಗಳ ಜನರಿಂದಲೂ ಹೊಗಳಿಸಿಕೊಳ್ಳುವ ಲೀಲೆಯುಳ್ಳವನೂ, ರಾಮದಾಸಾಭಿಮಾನಿಯೂ ಆದ ಪರಮಾತ್ಮನು ಭಕ್ತರನ್ನು ಎಂದೂ ಉಪೇಕ್ಷಿಸುವುದಿಲ್ಲ.

ಉಚ್ಚಸ್ವರದಿಂದ ಉಚ್ಚರಿಸಲ್ಪಟ್ಟ ಈ ಪ್ರಾಥಮಿಕಸ್ತೋತ್ರದಿಂದ ಸರ್ವಸಭೆಯು ತಟಸ್ಥವಾಯಿತು. ರಾಮದಾಸ ಸ್ವಾಮಿಗಳು ಇವರೇ ಎಂಬುದು ಎಲ್ಲರಿಗೂ ತಿಳಿದುಬಂತು ! ರಾಮದಾಸಸ್ವಾಮಿಗಳ ಕೀರ್ತಿಯು ಆ ಕಾಲದಲ್ಲಿ ಹಿಂದುಸ್ಥಾನದಲ್ಲೆಲ್ಲ ಹರಡಿತ್ತು. ಅವರ ಶಿಷ್ಯರು ಮಹಾರಾಷ್ಟ್ರದಲ್ಲೆಲ್ಲ ತಿರುಗಿ ಸಮರ್ಥಸಂಪ್ರದಾಯವನ್ನು ಮನೆ ಮನೆಯಲ್ಲಿಯೂ ಹೆಚ್ಚಿಸುತ್ತಿದ್ದರು. ರಾಮದಾಸರ ವಾಣಿಯು ಮಹಾರಾಷ್ಟ್ರದಲ್ಲೆಲ್ಲ ಸಂಚರಿಸುತ್ತಿತ್ತು. ರಾಮದಾಸರು ಮಹಾತ್ಮರೆಂದು ಎಲ್ಲರೂ ತಿಳಿಯುತ್ತಿದ್ದರು. ಆದರೆ ಬಹುಜನರು ಅವರನ್ನು ಪ್ರತ್ಯಕ್ಷವಾಗಿ ನೋಡಿದ್ದಿಲ್ಲ. ತಮ್ಮ ಕಾರ್ಯಕ್ಕೆ ಸಾಹಾಯ್ಯವಾಗಬೇಕೆಂದು ರಾಮದಾಸರು ಮರಾಟರ ಮನಸ್ಸಿನಲ್ಲಿ ನಿಜವಾದ ಹಿಂದೂಧರ್ಮದ ಮತ ಸ್ವಾತಂತ್ರ್ಯದ ಬೀಜವನ್ನು ಬಿತ್ತುವ ಕೆಲಸವನ್ನು ಕಯ್ಕೊಂಡಿದ್ದಾರೆಂದು ಶಿವಾಜಿಯು ಕೇಳಿದ್ದನು. ಆದರೆ ಆತನು ರಾಮದಾಸಸ್ವಾಮಿಗಳನ್ನು ಪ್ರತ್ಯಕ್ಷವಾಗಿ ನೋಡಿದ್ದಿಲ್ಲ. ಇಂದು ಆ ಯೋಗವು ಅನಾಯಾಸವಾಗಿಯೇ ಒದಗಿತು !

ಶಿವಾಜಿಯು ಮನಸ್ಸಮುದ್ರದಲ್ಲಿ ಆನಂದದ ಊರ್ಮಿಗಳು ಏಳಲಾರಂಭಿಸಿದುವು. ಅತ್ಯಂತಭಕ್ತಿಯಿಂದ ಅವನು ಸ್ವಾಮಿಗಳ ಪಾದಗಳಿಗೆ ಸಾಷ್ಟಾಂಗವಾಗಿ ಎರಗಿದನು. ಸ್ವಾಮಿಗಳಾದರೂ ಆತನನ್ನು ಎಬ್ಬಿಸಿ ಅಪ್ಪಿಕೊಂಡರು. ಮಹಾರಾಷ್ಟ್ರದ ಉದ್ಧಾರಕ್ಕೋಸ್ಕರ ಪ್ರಯತ್ನಮಾಡುತ್ತಿರುವ ಮಹಾಪುರುಷರಿಬ್ಬರೂ ಪರಸ್ಪರ ಭೆಟ್ಟಿಯಾದರು. ಆ ದೃಶ್ಯವನ್ನು ನೋಡಿ ಎಲ್ಲರೂ ಬೆರಗಾದರು. ಎಲ್ಲರೂ ಸ್ವಾಮಿಗಳ ಪದಕಮಲಗಳಿಗೆ ನಮಸ್ಕರಿಸಿದರು.

ಅನಂತರ ಸ್ವಾಮಿಗಳು ಉಪದೇಶಮಾಡಿದರು. “ ನಮ್ಮ ಹಿಂದೂಧರ್ಮವು ಉದಾರವೂ ಉಜ್ವಲವೂ ಆಗಿದೆ. ಮುಸಲ್ಮಾನರ ಆಧಿಪತ್ಯದಿಂದ ನಮ್ಮ ಧರ್ಮದಮೇಲೆ ಬಿದ್ದಿರುವ ಮಾಲಿನ್ಯವನ್ನು ತೊಳೆದುಬಿಡುವುದಕ್ಕಾಗಿಯೇ ಶಿವಾಜಿಯು ಅವತರಿಸಿದ್ದಾನೆ! ಆತನ ಪ್ರಯತ್ನಕ್ಕೆ ಬೇಗನೇ ತಕ್ಕ ಫಲವು ದೊರೆಯುವುದು. ಮಹಾರಾಷ್ಟ್ರವು ಸ್ವತಂತ್ರವಾಗುವುದು. ಬ್ರಾಹ್ಮಣಧರ್ಮವು

ಉಜ್ವಲವಾಗುವುದು. ಬ್ರಾಹ್ಮಣನಾರು? ಹಿಂದೂಧರ್ಮದ ಮತ್ತು ಆರ್ಯಮಾತೆಯ ಉದ್ಧಾರಕ್ಕಾಗಿ ಯಾವನ ಹೃದಯವು ತಳಮಳಿಸುತ್ತದೆಯೋ, ಭರತವರ್ಷವು ಪಾರತಂತ್ರ್ಯದಿಂದ ನುಗ್ಗಾಗುತ್ತಿರುದನ್ನು ನೋಡಿ ಯಾವನ ಹೃದಯಕ್ಕೆ ಬಲವಾದ ವೇದನೆಯಾಗುತ್ತದೆಯೋ, ಹಿಂದುಸ್ಥಾನದೊಳಗಿನ ಪ್ರತಿಯೊಬ್ಬ ಭಾರತೀಯನನ್ನು ತನ್ನಬಂಧುವೆಂದು ಯಾವನು ತಿಳಿಯುತ್ತಾನೆಯೋ, ಹಿಂದಕ್ಕೆ ಹಿಂದುಸ್ಥಾನದಲ್ಲಿ ಆಗಿಹೋದ ವೀರರೂ ಸಂತರೂ ತನ್ನವರೆಂದು ಯಾವನು ತಿಳಿಯುತ್ತಾನೆಯೋ, ತನ್ನ ಪ್ರಿಯದೇಶಕ್ಕಾಗಿಯೂ ತನ್ನ ಸಹೋದರರಿಗಾಗಿಯೂ ತನ್ನ ಪೂರ್ವಜರ ಕೀರ್ತಿಗೋಸ್ಕರವಾಗಿಯೂ ತನ್ನವರ ಉಜ್ವಲವಾದ ಚರಿತ್ರೆಗೋಸ್ಕರವಾಗಿಯೂ ಯಾವನು ಆದರಭಾವವನ್ನು ತಳೆದುಕೊಳ್ಳಲು ಸಿದ್ಧನಾಗುತ್ತಾನೆಯೋ, ಅವನೇ ನಿಜವಾದ ದೇಶಭಕ್ತನು. ಅವನೇ ನಿಜವಾದ ಹಿಂದುವು! ಅವನೇ ನಿಜವಾದ ಬ್ರಾಹ್ಮಣನು! ಬ್ರಾಹ್ಮಣರ ಹೊಟ್ಟೆಯಲ್ಲಿ ಹುಟ್ಟಿದ್ದರೂ ಸ್ವಾರ್ಥಕ್ಕಾಗಿ ಸ್ವದೇಶಹಿತವನ್ನು ತಿರಸ್ಕರಿಸುವವರು ಬ್ರಾಹ್ಮಣರಲ್ಲ! ಅವರೇ ಮ್ಲೇಂಛರು! ಅವರೇ ಪತಿತರು! ಅವರನ್ನೇ ಸಮಾಜದಿಂದ ಹೊರದೂಡಿರಿ! ಅವರಿಗೆ ಬಹಿಷ್ಕಾರವನ್ನು ಹಾಕಿರಿ! ವತ್ಸಾ, ಬಜಾಜೀ, ಹಿಂದೂಧರ್ಮದ ಉದ್ಧಾರಕ್ಕಾಗಿಯೂ ಮಹಾರಾಷ್ಟ್ರದ ಸ್ವಾತಂತ್ರ್ಯಕ್ಕಾಗಿಯೂ ನಿನ್ನ ಹೃದಯವು ತಳಮಳಿಸುತ್ತದೆ. ನೀನು ಹಿಂದುವು. ನೀನು ಪಾವನನು. ನಿನ್ನಿಂದ ದೇಶಸೇವೆಯೂ ಧರ್ಮಸೇವೆಯೂ ಘಟಿಸುವುದು. ಇದು ನನ್ನ ಪೂರ್ಣ ಆಶೀರ್ವಾದವು."

"ಜಯ ಜಯ ರಘುವೀರ ಸಮರ್ಥ!" ಎಂದು ಎಲ್ಲರೂ ಸ್ವಾಮಿಗಳೊಡನೆ ದೊಡ್ಡ ದನಿಯಿಂದ ಜಯಜಯಕಾರವನ್ನು ಮಾಡಿದರು! ಎಲ್ಲರೂ ನೋಡುತ್ತಿದ್ದಂತೆಯೇ ಸ್ವಾಮಿಗಳು ಅಲ್ಲಿಂದ ಮಾಯವಾಗಿ ಹೋದರು; ಅವರು ಹೇಗೆ ಎಲ್ಲಿಂದ ಹೋದರೆಂಬುದು ಕೆಲಹೊತ್ತಿನ ವರೆಗೆ ಯಾರಿಗೂ ತಿಳಿಯಲೇ ಇಲ್ಲ. ಯಾಕಂದರೆ ಜನರೆಲ್ಲರೂ ಅವರ ತೇಜಸ್ಸಿನಿಂದಲೂ ಭಾಷಣದಿಂದಲೂ ಮೋಹಿತರಾಗಿ ಮೈಮರೆತಿದ್ದರು. ಆ ಮೇಲೆ ಸರ್ವರೂ ಮೊದಲಿನಂತೆ ಶಿವಾಜಿಮಹಾರಾಜನ ಜಯಜಯಕಾರವನ್ನು ಮಾಡಿದರು.

ಕೃಷ್ಣಾಜೀಪಂತನೂ, ಶಿವರಾಮ ಮಹಾದೇವನೂ ಯಾವಾಗಲೋ ಅಲ್ಲಿಂದ ಹೊರಟು ಹೋಗಿದ್ದರು. ಸ್ವಾಮಿಗಳು ಅವರ ಕಣ್ಣಲ್ಲಿ ಒಳ್ಳೆಯ ಅಂಜನವನ್ನು ಹಾಕಿದರು. ಆದರೂ ಅವರು ತಮ್ಮ ಹಟವನ್ನು ಬಿಡಬೇಕಷ್ಟೇ?

ಅನಂತರ ಶೀಘ್ರವಾಗಿಯೇ ವಿಧಿಪೂರ್ವಕವಾಗಿ ಬಜಾಜಿಯನ್ನು ಹಿಂದೂಧರ್ಮದಲ್ಲಿ ತೆಗೆದುಕೊಂಡರು! ರಾಮದಾಸರ ಆಶೀರ್ವಾದವು ಫಲದ್ರೂಪವಾಯಿತು. ಶುದ್ಧಿ-ಸಂಘಟನದಿಂದ ಪತಿತೋದ್ಧಾರವಾಯಿತು! ಶಿವಾಜಿಮಹಾರಾ

ಜನ ಮೇಲೆ ಜನರ ಭಕ್ತಿಯು ಹೆಚ್ಚಾಗಿ ದೃಢವಾಯಿತು! ಹಿಂದೂಧರ್ಮದ ನಿಜವಾದ ರಹಸ್ಯವು ಶಿವಾಜಿಮಹಾರಾಜರಿಗೆ ಮಾತ್ರವೇ ಗೊತ್ತಾಗಿದೆಯೆಂದು ಎಲ್ಲರೂ ಅನ್ನಲಾರಂಭಿಸಿವರು. ಶಿವಾಜಿಯು ಹಿಂದೂಧರ್ಮಕ್ಕೆ ಉದಾತ್ತವಾದ ಮತ್ತು ವ್ಯಾಪಕವಾದ ನಿಜಸ್ವರೂಪವನ್ನು ಕೊಟ್ಟು ಬಜಾಜಿಯನ್ನು ಮತ್ತೆ ಹಿಂದೂಧರ್ಮದಲ್ಲಿ ತೆಗೆದುಕೊಳ್ಳುವುದಕ್ಕೆ ರಾಮದಾಸಸ್ವಾಮಿಗಳಂತಹ ಮಹಾತ್ಮರ ಸಮ್ಮತಿಯು ದೊರೆತುದರಿಂದ ಸಮಾಜಗಂಗೆಯು ಪ್ರಕ್ಷುಬ್ಧವಾಗಲಿಲ್ಲ. ಆದುದರಿಂದ ಶಿವಾಜಿಗೆ '**ಹಿಂದೂಧರ್ಮಸ್ಥಾಪಕ**' ಎಂಬ ಪದವಿಯು ದೊರೆಯಿತು !

ಶಿವಾಜಿಯು ಪ್ರೇಮದಿಂದ ಎಲ್ಲ ಜನರಿಗೂ ಹೇಳಿದನು. "**ನಾವೆಲ್ಲರೂ ಹಿಂದೂಗಳು! ನಾವೆಲ್ಲರೂ ಅಣ್ಣತಮ್ಮಂದಿರು! ನಮ್ಮ ದೇಶಕ್ಕಾಗಿ ಪ್ರೇಮದಿಂದ ನಮ್ಮ ಹೃದಯವನ್ನೇ ಅರ್ಪಿಸೋಣ; ಅಂದರೆ ಒಂದು ಕ್ಷಣವಾದರೂ ವಿಲಂಬವಾಗದೆ ನಮ್ಮ ದೇಶವು ಸ್ವತಂತ್ರವಾಗುವುದು. ನಮ್ಮ ದೇಶವು ಎಂದು ಸ್ವತಂತ್ರವಾಗುವುದೋ ಅಂದೇ ಹಿಂದೂಧರ್ಮದ ಭಾಗ್ಯೋದಯದ ದಿವಸವು ! ಹಾಗಾದಾರೆ ಎಲ್ಲರೂ ಅನ್ನಿರಿ. ಜಯ ಜಯ ರಘುವೀರ ಸಮರ್ಥ ! ಜಯ ಜಯ ರಘುವೀರ ಸಮರ್ಥ !! ಜಯ ಜಯ ರಘುವೀರ ಸಮರ್ಥ !!!**"

ಪ್ರಚಂಡವಾದ ನಿನಾದವು ಎಲ್ಲ ಕಡೆಯಲ್ಲಿಯೂ ವ್ಯಾಪಿಸಿತು. ಆ ನಿನಾದದಲ್ಲಿ ತೀವ್ರವೂ ಉತ್ಕಂಠಿತವೂ ಆದ ಬಜಾಜಿಯ ಧ್ವನಿಯು ಸ್ಪಷ್ಟವಾಗಿ ಕೇಳಿಸುತ್ತಿತ್ತು !



## ಹದಿಮೂರನೆಯ ಪ್ರಕರಣ



## ಕೊನೆಯ ಮಾತು



ನಮ್ಮ ಕಥಾನಕವು ಸಮಾಪ್ತವಾಯಿತು. ಆದರೆ, "ಇದರ ಮುಂದೆ ಯಾವ ಯಾವ ಸಂಗತಿಗಳು ಜರುಗಿದುವು ?" ಎಂದು ವಾಚಕರು ಒಂದುವೇಳೆ ಪ್ರಶ್ನ ಮಾಡಬಹುದು. ಆದುದರಿಂದ ಆ ಪ್ರಶ್ನೆಗೆ ಉತ್ತರವನ್ನು ಕೊಟ್ಟು ಅವರ ಅಪ್ಪಣೆಯನ್ನು ಪಡೆಯುವೆವು.

(೧) ಆ ಕಾಲವಲ್ಲಿ ಮುಸಲ್ಮಾನ ಬಾದಶಹರ ಅಂತಃಪುರದಲ್ಲಿ ನೀತಿಗೆ ವಿಶೇಷಮಹತ್ವವನ್ನು ಕೊಡದೆ, ವಿಲಾಸಸುಖದಲ್ಲಿ ಮಗ್ನರಾಗಿರುವುದೇ ಆಯುಷ್ಯದ ಸಾರ್ಥಕತೆಯೆಂದು ತಿಳಿಯುತ್ತಿದ್ದರು. ಈ ತಿಳಿವಳಿಕೆಯನ್ನನುಸರಿಸಿ ರೋಷನ ಬೇಗಮಳು ಬಾದಶಹನ ವಿಲಾಸಮಂದಿರದಲ್ಲಿ ಜೀವ ಹೋಗುವ ವರೆಗೂ ವಿಲಾಸಸುಖವನ್ನು ಉಪಭೋಗಿಸುತ್ತಿದ್ದಳು.

(೨) ಶಿವಾಜಿಯು ಮೇಲಿನ ಮುಖ್ಯವನ್ನು ತೀರಿಸಿಕೊಳ್ಳದೆ ಬಿಡುವುದಿಲ್ಲವೆಂದು ಪ್ರತಿಜ್ಞೆಮಾಡಿ ಅಫ್‌ಝುಲ್‌ಖಾನನು ವಿಜಾಪುರದ ಹಾದಿಯನ್ನು ಹಿಡಿದನು. ಆತನು ಶಿವಾಜಿಯನ್ನು ನಾಶಮಾಡಲು ಹೇಗೆ ಪ್ರಯತ್ನಮಾಡಿದನು ? ಆತನ ಉಪಾಯಗಳ ಕೊನೆಯ ಪರಿಣಾಮವೇನಾಯಿತು ? ಮೊದಲಾದ ಸಂಗತಿಗಳ ವಿವೇಚನೆಯನ್ನು "ಸದ್ಬೋಧ ಚಂದ್ರಿಕೆ" ಯಲ್ಲಿ ಪ್ರಸಿದ್ಧವಾದ "ಮರಾಠರ ಅಭ್ಯುದಯ" ಎಂಬ ಕಾದಂಬರಿಯಲ್ಲಿ ವಾಚಕರು ಓದಬಹುದು ; ನಮ್ಮ ಕಥಾನಕದ ತರುವಾಯ ಎರಡು ವರುಷಗಳ ಅವಧಿಯ ಮೇಲೆ ಆ ಸಂಗತಿಗಳು ಆರಂಭವಾದುವು.

(೩) ಬಜಾಜೀ ನಿಂಬಾಳಕರನೂ ಆತನ ಮಗನೂ ಚೆನ್ನಾಗಿ ದೇಶಸೇವೆಯನ್ನು ಮಾಡಿದರು; ಮತ್ತು ತಾವು ನಿಜವಾಗಿಯೂ ಹಿಂದೂಗಳಿರುವೆವೆಂಬುದನ್ನು ತಮ್ಮ ಕೃತಿಗಳಿಂದಲೇ ಜಗತ್ತಿನ ನಿದರ್ಶನಕ್ಕೆ ತಂದುಕೊಟ್ಟರು. ಬಜಾಜಿಯು ಕೊನೆಯ ವರೆಗೂ ತನ್ನ ಗಡ್ಡವನ್ನು ಮಾತ್ರ ಬೋಳಿಸಲಿಲ್ಲ. ಸ್ವರಾಜ್ಯ ಸ್ಥಾಪನೆಯ ಕೆಲಸದಲ್ಲಿ ಶಿವಾಜಿಗೆ ಆತನಿಂದ ಉತ್ತಮವಾದ ಸಾಹಾಯ್ಯವು ದೊರೆಯಿತು. ಬಜಾಜೆಯು ತಿರುಗಿ ಹಿಂದುವಾದರೂ ಆತನಿಗೆ ಪ್ರಾಪ್ತವಾದ 'ಖಾನ' ಎಂಬ ಪದವಿಯು ಮಾತ್ರ ಹೋಗಲಿಲ್ಲ. ಶಿವಾಜಿಯೂ ಇತರ ಸರದಾರರೂ ವಿನೋದದಿಂದ ಆತನಿಗೆ "ಖಾನಸಾಹೇಬ" ಎಂದೇ ಕರೆಯುತ್ತಿದ್ದರು.

(೪) ಕೃಷ್ಣಾಜೀಪಂತ ಹಾಗು ಶಿವರಾಮ ಮಹಾದೇವ ಈ ಇಬ್ಬರು ದಾಂಭಿಕಬ್ರಾಹ್ಮಣರಿಂದ ನಿಂಬಾಳಕರನಿಗೆ ಎಂದೂ ತೊಂದರೆಯಾಗಬಾರದೆಂದು ಶಿವಾಜಿಯು ತನ್ನ ಮಗಳಾದ ಸಖೂಬಾಯಿಯನ್ನು ಮಹಾದಾಜಿ ನಿಂಬಾಳಕರನಿಗೆ ವಿವಾಹಮಾಡಿಕೊಟ್ಟು, ನಿಂಬಾಳಕರಮನೆತನಕ್ಕೂ ತನಗೂ ಎರಡು ಪ್ರಕಾರದ ಸಂಬಂಧವನ್ನು ಮಾಡಿಕೊಂಡನು. ರಾಮದಾಸಸ್ವಾಮಿಗಳಂತಹರು ಇವರ ಕಣ್ಣಲ್ಲಿ ಅಂಜನವನ್ನು ಸುರಿದರೂ, ಅದರಿಂದ ಈ ವಿಧವಾದ ದೂಷಕರ ಮೇಲೆ

ವಿಶೇಷಪರಿಣಾಮವಾಗಲಿಕ್ಕಿಲ್ಲೆಂದು ತಿಳಿದೇ ಶಿವಾಜಿ ಮಹಾರಾಜನು ಆ ಪ್ರಕಾರ ಮಾಡಿದನು. ತಾನು ಕೇವಲ ಮಾತಿನ ಸುಧಾರಕನಾಗಿರದೆ, ಅಂತಹ ಕೃತಿಗಳನ್ನು ಪ್ರತ್ಯಕ್ಷವಾಗಿ ಮಾಡಿತೋರಿಸುವ ಸಜೀವಸುಧಾರಕನೆಂಬುದನ್ನು ಅವನು ಪ್ರಮಾಣಿಸಿಕೊಟ್ಟು ಕುಹಕರ ಬಾಯನ್ನು ಮುಚ್ಚಿದನು. ಮೇಲೆ ಹೇಳಿದ ದಾಂಭಿಕರಿಬ್ಬರೂ "ಶಿವಾಜಿಯು ಹಿಂದೂಧರ್ಮದ ಉದ್ಧಾರಕನಾಗಿರದೆ, ಅಧಿಕಾರದ ಬಲದಿಂದ ಧರ್ಮವನ್ನು ಕೆಡಿಸುವಂತಹವನಾಗಿದ್ದಾನೆ." ಎಂದು ಶಿವಾಜಿಯ ಮೇಲೆ ನಿಂದಾರೋಪವನ್ನು ಮಾಡಿದರು. ಆದರೆ ಜನರಿಗೆ ಶಿವಾಜಿಯ ಸತ್ಯತೆಯ ವಿಷಯದಲ್ಲಿ ಸಂಶಯವು ಉಳಿಯಲಿಲ್ಲ. ಜನಸಮಾಜವೆಲ್ಲ ಶಿವಾಜಿಯ ನಿಂದಕರನ್ನು ದೂಷಿಸತೊಡಗಿತು. '**ಗೋಬ್ರಾಹ್ಮಣ ಧರ್ಮಸಂಸ್ಥಾಪಕ**" ನೆಂಬ ಪದವಿಯು ಶಿವಾಜಿಗೆ ಸ್ಥಿರವಾಯಿತು. ನಿಂದಕರೂ ದೂಷಕರೂ ಹೇಳ ಹೆಸರಿಲ್ಲದೆ ಹೋದರು.

(೫) ಪ್ರಿಯವಾಚಕರೇ, 'ಇದರ ಮುಂದೆ ಯಾವ ಯಾವ ಸಂಗತಿಗಳು ಜರುಗಿದುವು ?' ಎಂಬ ಪ್ರಶ್ನೆಯನ್ನು ಮತ್ತೂ ಕೇಳುವಿರಾದರೆ, ಆ ಪ್ರಶ್ನೆಗೆ ಕಾಲಾಂತರದಲ್ಲಿ ಯಾವಾಗಲಾದರೊಮ್ಮೆ ಉತ್ತರವನ್ನೀಯುವೆವೆಂದು ಪ್ರೇಮಪೂರ್ವಕವಾಗಿ ಬೇಡಿಕೊಂಡು ಸದ್ಯಕ್ಕೆ ತಮ್ಮೆಲ್ಲರಿಗೂ ನಮಸ್ಕರಿಸುತ್ತೇವೆ.

**ಜಯ ! ಬಲಭೀಮ ಸಮರ್ಥ !**

**ಜಯ ! ಜಯ ! ರಘುವೀರಸಮರ್ಥ !**

ಶ್ರೀಕೃಷ್ಣಾರ್ಪಣಮಸ್ತು.

